KA / BG-GPO / 2515 / WPP-47 / 2009-2011

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೫ | ಬೆಂಗಳೂರು, ಗುರುವಾರ, ಆಗಸ್ಟ್ ೧೯, ೨೦೧೦ (ಶ್ರಾವಣ ೨೮, ಶಕ ವರ್ಷ ೧೯೩೨) | ಸಂಚಿಕೆ ೩೩ |
|---|---|---|

## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

**ವಸತಿ ಸಚಿವಾಲಯ**

**ವಿಷಯ :** ದೇವದುರ್ಗ ನಗರ ಆಶ್ರಯ ಸಮಿತಿಗೆ ಅಧ್ಯಕ್ಷರ ಮತ್ತು ಅಧಿಕಾರೇತರ ಸದಸ್ಯರ ನೇಮಕಾತಿ ಬಗ್ಗೆ.

**ಓದಲಾಗಿದೆ :** 1) ಸರ್ಕಾರದ ಆದೇಶ ಸಂ. ವಇ 42 ಹೆಚ್‌ಎಎಂ 1999 ದಿನಾಂಕ: 10–05–2000.
2) ಲೋಕ ಶಿಕ್ಷಣ ಗ್ರಂಥಾಲಯ, ಸಣ್ಣ ಉಳಿತಾಯ ಮತ್ತು ಲಾಟರಿ ಸಚಿವರ ನಡವಳಿ ಸಂ. ಲೋಶಿ. ಗ್ರಂ. ಸು.ಲಾ/ಸ/219/2010, ದಿನಾಂಕ 17–04–2010.

**ಪ್ರಸ್ತಾವನೆ :**

ಸರ್ಕಾರವು ನಗರ ಆಶ್ರಯ ಸಮಿತಿಗಳನ್ನು ಮೇಲೆ ಓದಲಾದ ಸರ್ಕಾರದ ಆದೇಶದನ್ವಯ ವಿಧಾನಸಭಾ ಕ್ಷೇತ್ರವಾರು ಪುನರ್‌ರಚಿಸಲು ತೀರ್ಮಾನಿಸಿದೆ. ದೇವದುರ್ಗ ಮತಕ್ಷೇತ್ರದ ಶಾಸಕರು ಹಾಗೂ ಲೋಕ ಶಿಕ್ಷಣ, ಗ್ರಂಥಾಲಯ, ಸಣ್ಣ ಉಳಿತಾಯ ಮತ್ತು ಲಾಟರಿ ಸಚಿವರು ಶ್ರೀ ಬಸವರಾಜ, ವಕೀಲರು, ಗೌರಂಪೇಟೆ, ತಾಲ್ಲೂಕು ದೇವದುರ್ಗ ಇವರನ್ನು ದೇವದುರ್ಗ ನಗರ ಆಶ್ರಯ ಸಮಿತಿಯ ಅಧ್ಯಕ್ಷರ ಹುದ್ದೆಗೆ ನೇಮಿಸುವಂತೆ ಸೂಚಿಸಿದ್ದು, ದೇವದುರ್ಗ ನಗರ ಆಶ್ರಯ ಸಮಿತಿಗೆ ಅಧ್ಯಕ್ಷರನ್ನು ಮತ್ತು ಅಧಿಕಾರೇತರ ಸದಸ್ಯರನ್ನು ನೇಮಿಸುತ್ತ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ ವಇ 28 ಹೆಚ್‌ಎಎಸ್ 2010, ಬೆಂಗಳೂರು, ದಿನಾಂಕ 12ನೇ ಮೇ 2010**

ಶ್ರೀ ಬಸವರಾಜ, ವಕೀಲರು, ಗೌರಂಪೇಟೆ, ತಾಲ್ಲೂಕು ದೇವದುರ್ಗ ಇವರನ್ನು ದೇವದುರ್ಗ ನಗರ ಆಶ್ರಯ ಸಮಿತಿಯ ಅಧ್ಯಕ್ಷರ ಹುದ್ದೆಗೆ ಮತ್ತು ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಆಶ್ರಯ ಸಮಿತಿಯನ್ನು ಪುನರ್‌ರಚಿಸಲಾಗಿದೆ.

| | **ಅಭ್ಯರ್ಥಿಯ ಹೆಸರು** | **ವರ್ಗ** |
|---|---|---|
| 1 | ಶ್ರೀ ರವಿಕುಮಾರ್ ಬಿನ್ ಗೌಡಯ್ಯ ಇಳಿಗೇರ್, ಹೊಸ ಬಸ್ ನಿಲ್ದಾಣದ ಹತ್ತಿರ, ದೇವದುರ್ಗ. | ಹಿಂದುಳಿದ ವರ್ಗ |
| 2 | ಶ್ರೀ ಖಾಜಾ ಹುಸೇನ್ ಬಿನ್ ಅಹಮ್ಮದ್ ಹುಸೇನ್ ಖಾಜಿ, ಮುರುಗೆಪ್ಪ ಸಾಹುಕಾರರ ಮನೆ ಹತ್ತಿರ ದೇವದುರ್ಗ. | ಅಲ್ಪಸಂಖ್ಯಾತರು |
| 3 | ಶ್ರೀ ತುಳಜಪ್ಪಾ ಬಿನ್ ಬೀಮಪ್ಪ ಛಲವಾದಿ ಓಣಿ, ದೇವದುರ್ಗ | ಪರಿಶಿಷ್ಟ ಜಾತಿ |
| 4 | ಶ್ರೀಮತಿ ಯಶೋದಾ ಕೋಂ. ಸಿದ್ದಯ್ಯಸ್ವಾಮಿ, ಪುರಾಣಿಕಮಠ, ಸರೋಜಿನಿ ಓಣಿ, ದೇವದುರ್ಗ. | ಸಾಮಾನ್ಯ (ಮಹಿಳೆ) |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

(ಕೆ. ಆರ್. ವಲ್ಲೂರ)
ಪೀಠಾಧಿಕಾರಿ–2 ವಸತಿ ಇಲಾಖೆ

ಪಿ.ಆರ್. 1268

**ಉನ್ನತ ಶಿಕ್ಷಣ ಸಚಿವಾಲಯ**

**ವಿಷಯ:** ಅಲಹಾಬಾದ್‌ನ ಪ್ರಯಾಗದಲ್ಲಿರುವ ಹಿಂದಿ ಪರಿಗಣಿತ ವಿಶ್ವವಿದ್ಯಾನಿಲಯದ ಶಿಕ್ಷಾ ವಿಶಾರದ ಬಿ.ಇಡಿ ಗೆ ಸಮಾನ ಎಂದು ಮಾನ್ಯತೆ ನೀಡುವ ಬಗ್ಗೆ.

**ಓದಲಾಗಿದೆ :** 1. ದಿನಾಂಕ 30–6–2009 ರಂದು ನಡೆದ 50 ನೇ ಅಂತರ ವಿಶ್ವವಿದ್ಯಾನಿಲಯ ಮಂಡಳಿ ಸಭೆಯ ನಿರ್ಣಯ.

2. ಸರ್ಕಾರದ ಪತ್ರ ಸಂಖ್ಯೆ: ಇಡಿ 110 ಯುಆರ್‌ಸಿ 2009, ದಿನಾಂಕ 24–8–2009.

**ಪ್ರಸ್ತಾವನೆ :**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ದಿನಾಂಕ 30–6–2009 ರಂದು ನಡೆದ 50ನೇ ಅಂತರ ವಿಶ್ವವಿದ್ಯಾನಿಲಯ ಮಂಡಳಿ ಸಭೆಯಲ್ಲಿ ಕನ್ನಡ ಪಂಡಿತರಿಗೆ ಬಿ.ಇಡಿ. ಶಿಕ್ಷಣಕ್ಕೆ ಅವಕಾಶ ಕಲ್ಪಿಸಿರುವ ಮಾದರಿಯಂತೆ ಸಂಸ್ಕೃತ ಪಂಡಿತರಿಗೂ ಬಿ.ಇಡಿ. ಶಿಕ್ಷಣಕ್ಕೆ ಅವಕಾಶ ಕಲ್ಪಿಸಲು ಹಾಗೂ ಅಲಹಾಬಾದ್‌ನ ಪ್ರಯಾಗದಲ್ಲಿರುವ ಹಿಂದಿ ಪರಿಗಣಿತ ವಿಶ್ವವಿದ್ಯಾನಿಲಯವು (ಸಾಹಿತ್ಯ ಸಮ್ಮೇಳನ ಅಲಹಾಬಾದ್) ಶಿಕ್ಷಾ ವಿಶಾರದವನ್ನು ಬಿ.ಇಡಿ.ಗೆ ಸಮಾನವೆಂದು ರಾಜ್ಯ ಸರ್ಕಾರವು ಮಾನ್ಯತೆ ಮಾಡಲು ನಿರ್ಣಯಿಸಲಾಯಿತು. ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ದಿನಾಂಕ 24–8–2009ರ ಪತ್ರದಲ್ಲಿ ಎಲ್ಲಾ ವಿಶ್ವವಿದ್ಯಾನಿಲಯಗಳಿಗೂ ಹಾಗೂ ಆಯುಕ್ತರು ಸಾರ್ವಜನಿಕ ಶಿಕ್ಷಣ ಇಲಾಖೆ, ಪದವಿ ಪೂರ್ವ ಶಿಕ್ಷಣ ಇಲಾಖೆ, ಕಾಲೇಜು ಶಿಕ್ಷಣ ಇಲಾಖೆ ಮತ್ತು ನಿರ್ದೇಶಕರು. ರಾಜ್ಯ ಶಿಕ್ಷಣ ಸಂಶೋಧನೆ ಮತ್ತು ತರಬೇತಿ ಇಲಾಖೆ, ಇವರುಗಳಿಗೆ ಅಂತರ ವಿಶ್ವವಿದ್ಯಾನಿಲಯಗಳ ಮಂಡಳಿ ಸಭೆಯ ನಿರ್ಣಯದಂತೆ ಕ್ರಮ ಕೈಗೊಳ್ಳಲು ಸಹ ತಿಳಿಸಲಾಗಿದೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ : ಇಡಿ 110 ಯುಆರ್‌ಸಿ 2009, ಬೆಂಗಳೂರು, ದಿನಾಂಕ 29ನೇ ಏಪ್ರಿಲ್2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಅಲಹಾಬಾದ್‌ನ ಪ್ರಯಾಗದಲ್ಲಿರುವ ಹಿಂದಿ ಪರಿಗಣಿತ ವಿಶ್ವವಿದ್ಯಾನಿಲಯದ ಶಿಕ್ಷಾ ವಿಶಾರದ ಪದವಿಯನ್ನು ಬಿ.ಇಡಿ.ಗೆ ಸಮಾನ ಎಂದು ಮಾನ್ಯತೆ ನೀಡಿ ಈ ಮೂಲಕ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಯು.ಬಿ.ಉಳವಿ)**

ಸರ್ಕಾರದ ಅಧೀನ ಕಾರ್ಯದರ್ಶಿ

ಉನ್ನತ ಶಿಕ್ಷಣ ಇಲಾಖೆ (ವಿಶ್ವವಿದ್ಯಾನಿಲಯಗಳು)

ಪಿ.ಆರ್. 1269

**ಒಳಾಡಳಿತ ಸಚಿವಾಲಯ**

**ವಿಷಯ:** ಬೆಂಗಳೂರು ನಗರ ಜಿಲ್ಲೆಯಲ್ಲಿ ಜಿಲ್ಲಾ ಗೃಹ ರಕ್ಷಕ ದಳದ ಕೇಂದ್ರ ವಲಯ ಕಛೇರಿಯನ್ನು ತೆರೆಯಲು ಹಾಗೂ ಅಲ್ಲಿಗೆ ಜಿಲ್ಲಾ ಸಮಾದೇಷ್ಟರ ಹುದ್ದೆಯನ್ನು ಸೃಜಿಸುವ ಬಗ್ಗೆ.

**ಓದಲಾಗಿದೆ :** 1) ಬೆಂಗಳೂರು ಜಿಲ್ಲಾಧಿಕಾರಿಯವರ ಪತ್ರ ಸಂ.ಎಂ.ಎ.ಜಿ.(4)ಎಸ್ ಸಿ.ಆರ್ 2/10–11, ದಿನಾಂಕ 3–4–2010.

2) ಪೊಲೀಸ್ ಮಹಾ ನಿರ್ದೇಶಕರು ಹಾಗೂ ಮಹಾ ಸಮಾದೇಷ್ಟರು, ಗೃಹರಕ್ಷಕ ದಳ ಮತ್ತು ಪೌರರಕ್ಷಣಾ ಇಲಾಖೆ ಇವರ ಪತ್ರ ಸಂ. ಆಡಳಿತ (1) 1/ಸಿಜಿಓ/2010–11, ದಿನಾಂಕ 13–4–2010.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಬೆಂಗಳೂರು ಜಿಲ್ಲಾಧಿಕಾರಿಯವರ ಪತ್ರದಲ್ಲಿ ಬೆಂಗಳೂರು ನಗರವು ಇತ್ತೀಚೆಗೆ ಬೃಹತ್ ಬೆಂಗಳೂರು ಮಹಾನಗರವಾಗಿ ಬೆಳೆದಿದ್ದು, ಸಾಮಾಜಿಕ ಭದ್ರತೆ ಹಿತಾಸಕ್ತಿಯಿಂದ ಈಗಾಗಲೇ ನೇಮಕವಾಗಿರುವ ಗೌರವ ಸಮಾದೇಷ್ಟರ ವತಿಯಿಂದ ಬೆಂಗಳೂರು ವಲಯವನ್ನು ನಿರ್ವಹಿಸಲು ಬಹಳ ಕಷ್ಟವಾಗಿರುತ್ತದೆ. ಈ ಹಿನ್ನಲೆಯಲ್ಲಿ ಬೆಂಗಳೂರು ಕೇಂದ್ರ ವಲಯವನ್ನು ತೆರೆದು ಗೃಹರಕ್ಷಕ ದಳವನ್ನು ಸಾಮಾಜಿಕ ಭದ್ರತೆಯನ್ನು ನಿಯಂತ್ರಣ ಮಾಡುವ ದೃಷ್ಟಿಯಿಂದ ಹಾಗೂ ಕಾರ್ಯ ಒತ್ತಡ ಹೆಚ್ಚಾಗಿರುವ ಹಿನ್ನಲೆಯಲ್ಲಿ ಬೆಂಗಳೂರು ಕೇಂದ್ರ ವಲಯವನ್ನು ಸೃಜಿಸಬೇಕಾಗಿರುತ್ತದೆ. ಹಾಗೂ ಅದರಂತೆ ಸಾಮಾಜಿಕ ಭದ್ರತೆಯನ್ನು ನಿಯಂತ್ರಣ ಮಾಡುವ ದೃಷ್ಟಿಯಿಂದ ಮತ್ತೊಂದು ಗೌರವ ಸಮಾದೇಷ್ಟರನ್ನು ನೇಮಕ ಮಾಡಿಕೊಳ್ಳುವುದು ಸೂಕ್ತವಾಗಿರುತ್ತದೆ ಎಂದು ತಿಳಿಸುತ್ತಾ, ಈ ಹಿನ್ನಲೆಯಲ್ಲಿ ಬೆಂಗಳೂರು ನಗರ ಜಿಲ್ಲೆಗೆ ಇನ್ನೊಂದು ಕೇಂದ್ರ ವಲಯವನ್ನು ಸೃಜಿಸಿದಲ್ಲಿ ಇದರಿಂದ ಯಾವುದೇ ವಿಧವಾದ ಆರ್ಥಿಕ ಒತ್ತಡಗಳು ಏರುವುದು ಕಂಡು

ಬರುತ್ತಿಲ್ಲವಾದ್ದರಿಂದ ಇರುವ ಆರ್ಥಿಕ ಸ್ಥಿತಿಯಲ್ಲೇ ಬೆಂಗಳೂರು ಕೇಂದ್ರಕ್ಕೆ ಹೊಸ ಕೇಂದ್ರ ಗೃಹರಕ್ಷಕ ದಳವನ್ನು ತೆರೆದು ಗೌರವ ಸಮಾದೇಷ್ಠರನ್ನು ನೇಮಕ ಮಾಡಬೇಕೆಂದು ಕೋರಿರುತ್ತಾರೆ.

ಮೇಲೆ ಓದಲಾದ (2) ಪತ್ರದಲ್ಲಿ ಪೊಲೀಸ್ ಮಹಾ ನಿರ್ದೇಶಕರು ಹಾಗೂ ಮಹಾ ಸಮಾದೇಷ್ಟರು, ಗೃಹರಕ್ಷಕ ದಳ ಮತ್ತು ಪೌರರಕ್ಷಣಾ ಇಲಾಖೆ ಇವರು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿ, ಪ್ರಸುತ್ತ ಬೆಂಗಳೂರು ಜಿಲ್ಲಾ ಗೃಹರಕ್ಷಕ ದಳವು ಬೆಂಗಳೂರು ನಗರ ಜಿಲ್ಲೆ (Urban) ಹಾಗೂ ಬೆಂಗಳೂರು ಗ್ರಾಮಾಂತರ ಜಿಲ್ಲೆಗಳಾಗಿ (Rural) ವಿಭಜಿತವಾಗಿ ಪ್ರತ್ಯೇಕವಾಗಿ ಕಾರ್ಯನಿರ್ವಹಿಸುತ್ತಿವೆ. ಬೆಂಗಳೂರು ನಗರದ ಜನ ಸಂಖ್ಯೆ ಗಣನೀಯ ಪ್ರಮಾಣದಲ್ಲಿ ಏರುತ್ತಿದ್ದು, ಸುಮಾರು 80 ಲಕ್ಷ ಜನ ಸಂಖ್ಯೆಯನ್ನು ಮುಟ್ಟುತ್ತಿರುವುದರಿಂದ, ಗೃಹರಕ್ಷಕ ಕಾರ್ಯಚಟುವಟಿಕೆಗಳನ್ನು ಬೆಂಗಳೂರು ಬೃಹತ್ ನಗರ ವ್ಯಾಪ್ತಿಯಲ್ಲಿ ಬಲಗೊಳಿಸಲು ಹಾಗೂ ಸಮರ್ಪಕವಾಗಿ ನಿರ್ವಹಿಸಿಕೊಂಡು ಹೋಗಲು ಬೆಂಗಳೂರು ಕೇಂದ್ರ ವಲಯಕ್ಕೆ ಗೌರವ ಸಮಾದೇಷ್ಟರ ಅಗತ್ಯತೆ ಕಂಡುಬರುತ್ತದೆ. ಪ್ರಸ್ತುತ ಇರುವ ಬೆಂಗಳೂರು ನಗರ ಹಾಗೂ ಗ್ರಾಮಾಂತರ ಜಿಲ್ಲಾ ಗೃಹರಕ್ಷಕ ದಳದೊಂದಿಗೆ " ಬೆಂಗಳೂರು ಕೇಂದ್ರ ವಲಯ" ಗೃಹರಕ್ಷಕ ದಳದ ಕಛೇರಿಯನ್ನು ಸೃಜಿಸುವ ವಿಷಯವು ಸಮಂಜಸವಾಗಿರುತ್ತದೆ. ಹೊಸದಾಗಿ ಸ್ಥಾಪಿಸಲು ಉದ್ದೇಶಿಸಲಾದ ಬೆಂಗಳೂರು ಕೇಂದ್ರ ವಲಯ ಗೃಹರಕ್ಷಕ ದಳದ ಕಚೇರಿಯ ಆಡಳಿತ ನಿರ್ವಹಣೆ ಹಾಗೂ ಗೃಹರಕ್ಷಕರಿಗೆ ತರಬೇತಿಯನ್ನು ನೀಡುವಲ್ಲಿ ಗೌರವ ಸಮಾದೇಷ್ಟರಿಗೆ ನೆರವು ನೀಡಲು ಪ್ರಾರಂಭಿಕವಾಗಿ ಅತಿ ಕನಿಷ್ಠ ಮಟ್ಟದಲ್ಲಿ ಈ ಕೆಳಕಂಡ ಲಿಪಿಕ ಹಾಗೂ ಕಾರ್ಯನಿರ್ವಾಹಕ ಸಿಬ್ಬಂದಿಯ ಅವಶ್ಯಕತೆ ಇರುತ್ತದೆ ಎಂದು ತಿಳಿಸಿರುತ್ತಾರೆ.

| | | | |
|---|---|---|---|
| 1. | ಸಹಾಯಕ ಆಡಳಿತಾಧಿಕಾರಿ | – | 1 ಹುದ್ದೆ |
| 2. | ಅಧೀಕ್ಷಕರು | – | 1 ಹುದ್ದೆ |
| 3. | ಪ್ರಥಮ ದರ್ಜೆ ಸಹಾಯಕ | – | 1 ಹುದ್ದೆ |
| 4. | ದ್ವಿತೀಯ ದರ್ಜೆ ಸಹಾಯಕ | – | 1 ಹುದ್ದೆ |
| 5. | ಬೆರಳಚ್ಚುಗಾರ | – | 1 ಹುದ್ದೆ |
| 6. | ಉಪ ಸಮಾದೇಷ್ಟರು | – | 1 ಹುದ್ದೆ |
| 7. | ಬೋಧಕ | – | 1 ಹುದ್ದೆ |
| 8. | ಸಹಾಯಕ ಬೋಧಕ | – | 2 ಹುದ್ದೆ |
| 9. | ಚಾಲಕ | – | 1 ಹುದ್ದೆ |
| 10. | ದಲಾಯತ್ | – | 1 ಹುದ್ದೆ |
| 11. | ಕಾವಲುಗಾರ | – | 1 ಹುದ್ದೆ |
| | ಒಟ್ಟು | – | 12 ಹುದ್ದೆ |

ಈ ಹುದ್ದೆಗಳನ್ನು ಹೊಸದಾಗಿ ಸೃಜಿಸುವುದರಿಂದ ವಾರ್ಷಿಕವಾಗಿ ರೂ. 23,40,228 ವೆಚ್ಚ ತಗಲುತ್ತದೆ. ಈ ವೆಚ್ಚವನ್ನು ಪ್ರಸಕ್ತ ಸಾಲಿಗೆ ಹಂಚಿಕೆ ಆಗಿರುವ ಅನುದಾನದಲ್ಲಿ ಲಭ್ಯವಾಗುವ ಉಳಿತಾಯದಲ್ಲಿ ಭರಿಸಲಾಗುವುದು ಎಂದು ತಿಳಿಸಿ ಈ ಕೆಳಕಂಡ ಅಂಶಗಳನ್ನು ಸರ್ಕಾರದ ಪರಿಗಣನೆಗಾಗಿ ಸಲ್ಲಿಸಿದ್ದಾರೆ.

1) ಬೆಂಗಳೂರು ಕೇಂದ್ರ ವಲಯ ಎಂದು ಹೊಸದಾಗಿ ಜಿಲ್ಲಾ ಗೃಹರಕ್ಷಕ ದಳದ ಕಚೇರಿಯನ್ನು ಸ್ಥಾಪಿಸಲು;
2) ಬೆಂಗಳೂರು ಕೇಂದ್ರ ವಲಯ ಗೃಹರಕ್ಷಕ ದಳಕ್ಕೆ ಗೌರವ ಸಮಾದೇಷ್ಠರ ಹುದ್ದೆಯನ್ನು ಸೃಜಿಸುವ ಕುರಿತು;
3) ಅನುಬಂಧ 'ಅ' ರಲ್ಲಿ ಕೋರಿರುವಂತೆ ವಾರ್ಷಿಕ ರೂ. 23,40,228/– ಸರಾಸರಿ ಹೆಚ್ಚುವರಿ ಅವರ್ತಕ ವೆಚ್ಚದಲ್ಲಿ ಬೆಂಗಳೂರು ಕೇಂದ್ರ ವಲಯ ಜಿಲ್ಲಾ ಕಛೇರಿಗೆ ಬೇಕಾಗುವ ಒಟ್ಟು 12 ಹುದ್ದೆಗಳನ್ನು ಹೊಸದಾಗಿ ಸೃಜಿಸಲು;
4) ನೂತನ ಕಚೇರಿಗೆ ಕಟ್ಟಡದ ಬಾಡಿಗೆ, ವಿದ್ಯುತ್ ಮತ್ತು ನೀರಿನ ದರ ರೂ. 4,44,000/– 071 – ಕಟ್ಟಡ ವೆಚ್ಚಗಳು ಲೆಕ್ಕ ಶೀರ್ಷಿಕೆಯಡಿಯಲ್ಲಿ ಹೆಚ್ಚುವರಿ ಅನುದಾನ ಬಿಡುಗಡೆಗೊಳಿಸಲು;
5) ರೂ. 5 ಲಕ್ಷಗಳ ವೆಚ್ಚದಲ್ಲಿ ಒಂದು ಹೊಸ ಜೀಪು ಮತ್ತು ರೂ. 1 ಲಕ್ಷ ವೆಚ್ಚದಲ್ಲಿ 2 ಮೋಟಾರ್ ಸೈಕಲ್ ಖರೀದಿಸಲು ಮತ್ತು ಇಂಧನ ಬಾಬ್ತಿಗಾಗಿ ವಾರ್ಷಿಕವಾಗಿ ರೂ. 1.2 ಲಕ್ಷದಂತೆ ಒಟ್ಟು ರೂ. 7.2 ಲಕ್ಷ 195 ಸಾರಿಗೆ ಲೆಕ್ಕ ಶೀರ್ಷಿಕೆಯಡಿ ಹೆಚ್ಚುವರಿ ಅನುದಾನ ಬಿಡುಗಡೆಗೊಳಿಸಲು;

6) ಪೀಠೋಪಕರಣ, ದೂರವಾಣೀ ಅಳವಡಿಕೆ, ಕಂಪ್ಯೂಟರ್ ಇತ್ಯಾದಿ ಉಪಕರಣಗಳನ್ನು ಖರೀದಿಸಲು ಮತ್ತು ಅದರ ನಿರ್ವಹಣೆ ಮತ್ತು ಇತರೆ ಕಛೇರಿ ವೆಚ್ಚಗಳನ್ನು ಭರಿಸಲು ರೂ. 3,56,500/– ವೆಚ್ಚ 051 ಸಾಮಾನ್ಯ ವೆಚ್ಚ ಲೆಕ್ಕ ಶೀರ್ಷಿಕೆಯಡಿಯಲ್ಲಿ ಹೆಚ್ಚುವರಿ ಅನುದಾನ ಬಿಡುಗಡೆಗೊಳಿಸಲು;
7) ಗೃಹರಕ್ಷಕರನ್ನು ಕರ್ತವ್ಯಕ್ಕೆ ನಿಯೋಜಿಸಲು ರೂ. 6,38,75,000/– ಸ್ವಷ್ಟತಾ ಭತ್ಯೆ ರೂ. 2,40,000/– ಕವಾಯತು ಭತ್ಯೆ ರೂ. 10,80,000/– ಸೇರಿ ಒಟ್ಟು ರೂ. 6,51,95,000/– 015– ಪೂರಕ ವೆಚ್ಚದಲ್ಲಿ ಹೆಚ್ಚುವರಿ ಅನುದಾನ ಬಿಡುಗಡೆಗೊಳಿಸಲು;
8) ಗೃಹರಕ್ಷಕರಿಗೆ ಸಮವಸ್ತ್ರಕ್ಕಾಗಿ ರೂ. 12,20,000/– 221– ಸಾಧನ ಮತ್ತು ಸಾಮಗ್ರಿಗಳ ವೆಚ್ಚದ ಅಡಿಯಲ್ಲಿ ಹೆಚ್ಚುವರಿ ಅನುದಾನ ಬಿಡುಗಡೆಗೊಳಿಸಲು;
9) ರಾಜ್ಯ ಗೃಹರಕ್ಷಕರ ಸಂಖ್ಯಾಬಲವನ್ನು 25,000 ದಿಂದ 26, 000ಕ್ಕೆ ಏರಿಸಲು;

ಈ ಪ್ರಸ್ತಾವನೆಗೆ ಒಟ್ಟು ರೂ. 8,84,500/– ಅನಾವರ್ತಕ ವೆಚ್ಚ ಮತ್ತು ರೂ. 6,93,91,228/– ಅವರ್ತಕ ವೆಚ್ಚ ತಗಲುತ್ತದೆಂದು ತಿಳಿಸಿರುತ್ತಾರೆ.

ಮಹಾಸಮಾದೇಷ್ಟರ ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಒಇ 49 ಕಗೃಸೇ 2010, ಬೆಂಗಳೂರು, ದಿನಾಂಕ 15ನೇ ಮೇ2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬೃಹತ್ ಬೆಂಗಳೂರಿಗೆ ಹೊಸ ಗೃಹರಕ್ಷಕ ದಳ ಕೇಂದ್ರ ವಲಯ .ಕಛೇರಿಯನ್ನು ತೆರೆಯಲು ಹಾಗೂ ಇಲ್ಲಿಗೆ ಒಂದು ಜಿಲ್ಲಾ ಗೌರವ ಸಮಾದೇಷ್ಟರ ಹುದ್ದೆಯನ್ನು ಮಾತ್ರ ಸೃಜಿಸಲು ಸರ್ಕಾರವು ಮಂಜೂರಾತಿ ನೀಡಿದೆ.

ಈ ಕೇಂದ್ರಕ್ಕೆ ಹೊಸ ಗೌರವ ಸಮಾದೇಷ್ಟರ ಹುದ್ದೆಗೆ ಅಗತ್ಯ ಇರುವ ಸಿಬ್ಬಂದಿಯನ್ನು ಪ್ರಸ್ತುತ ಬೆಂಗಳೂರು ಗ್ರಾಮಾಂತರ ಹಾಗೂ ನಗರ ಜಿಲ್ಲಾ ಕಚೇರಿಗಳಲ್ಲಿ ನಿರ್ವಹಿಸುತ್ತಿರುವ ಸಿಬ್ಬಂದಿಯನ್ನು ಮರು ಹಂಚಿಕೆ ಮಾಡಿಕೊಂಡು ಕಾರ್ಯನಿರ್ವಹಿಸಲು ಹಾಗೂ ಸದರಿ ಹೊಸ ಕಛೇರಿ ಸ್ಥಾಪಿಸುವುದರಿಂದ ಕಛೇರಿ ಕಟ್ಟಡ ಬಾಡಿಗೆ, ಪೀಠೋಪಕರಣ ಮತ್ತು ಇತರ ಕಛೇರಿ ವೆಚ್ಚಗಳ ಬಾಬ್ತನ್ನು ಪ್ರಸಕ್ತ ಬೇರೆ ಜಿಲ್ಲಾ ಕಛೇರಿಗಳಿಗೆ ಮಂಜೂರಾಗಿರುವ ರೀತಿಯಲ್ಲಿಯೇ ಮಂಜೂರುಮಾಡಲು ಈ ಮೂಲಕ ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಅಇ 134 ವೆಚ್ಚ – 11/2010 ದಿನಾಂಕ: 14/05/2010 ರಲ್ಲಿ ನೀಡಿರುವ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**(ಬಿ.ಎಂ. ಲಕ್ಷೀನಾರಾಯಣ)**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ
(ಪೊಲೀಸ್ ಸಹಾಯಕ ಸೇವೆಗಳು)

ಪಿ.ಆರ್. 1270

**ಒಳಾಡಳಿತ ಸಚಿವಾಲಯ**

**ವಿಷಯ:** ಶ್ರೀ ಆರ್. ಪುಟ್ಟರಂಗಯ್ಯ ಬಿನ್ ರಂಗಯ್ಯ ನಿವೃತ್ತ ಶಿಕ್ಷಕ, 8ನೇ ಅಡ್ಡ ರಸ್ತೆ ಎಸ್.ಐ.ಟಿ. ಬಡಾವಣೆ, ತುಮಕೂರು ಇವರ ಮಗನಾದ ಎನ್.ಪಿ. ರಘುನಾಥ್ ಇವರ ಮರಣದ ಬಗ್ಗೆ ಸಿ.ಐ.ಡಿ. ತನಿಖೆ.

**ಓದಲಾಗಿದೆ :** ಶ್ರೀ ಆರ್. ಪುಟ್ಟರಂಗಯ್ಯ ಇವರ ಮನವಿ ದಿನಾಂಕ 9–4–2010

**ಪ್ರಸ್ತಾವನೆ :**

ಶ್ರೀ ಆರ್. ಪುಟ್ಟರಂಗಯ್ಯ ಬಿನ್ ರಂಗಯ್ಯ ನಿವೃತ್ತ ಶಿಕ್ಷಕ, 8ನೇ ಅಡ್ಡ ರಸ್ತೆ ಎಸ್.ಐ.ಟಿ. ಬಡಾವಣೆ, ತುಮಕೂರು ಇವರ ಮಗನಾದ ಎನ್. ಪಿ. ರಘುನಾಥ್, ಇವರ ಮರಣದ ಬಗ್ಗೆ ಸಿ.ಐ.ಡಿ. ತನಿಖೆ ನಡೆಸುವಂತೆ ಕೋರಿ ಮೇಲೆ ಓದಲಾದ ಮನವಿಯಲ್ಲಿ ಕೋರಿರುತ್ತಾರೆ.

ಈ ಕೊಲೆಯ ಬಗ್ಗೆ ತುಮಕೂರಿನ ಎನ್.ಇ.ಪಿ.ಎಸ್. ಪೊಲೀಸ್ ಠಾಣೆಯಲ್ಲಿ ಅಪರಾಧ ಸಂ.247/2009 ದಾಖಲಾಗಿರುವುದು ಕಂಡು ಬರುತ್ತದೆ.

ಈ ವಿಷಯವನ್ನು ಕೂಲಂಕಷವಾಗಿ ಪರಿಶೀಲಿಸಲಾಗಿದ್ದು ಕೆಳಕಂಡಂತೆ ಆದೇಶಿಸಲಾಗಿದೆ.

**ಆದೇಶ ಸಂಖ್ಯೆ : ಒಇ 63 ಸಿಐಡಿ 2010, ಬೆಂಗಳೂರು, ದಿನಾಂಕ 13ನೇ ಮೇ 2010**

ಮೇಲೆ ವಿವರಿಸಿರುವ ಹಿನ್ನಲೆಯಲ್ಲಿ ತುಮಕೂರಿನ ಎಸ್.ಐ.ಟಿ. ಬಡಾವಣೆಯ ಶ್ರೀ ಎನ್.ಪಿ. ರಘುನಾಥ್, ಎಂಬುವವರು ದಿನಾಂಕ 21–2–2009ರಂದು ಕೊಲೆಯಾಗಿರುವ ಬಗ್ಗೆ ತುಮಕೂರಿನ ಎನ್.ಇ.ಪಿ.ಎಸ್. ಪೊಲೀಸ್ ಠಾಣೆಯಲ್ಲಿ ದಾಖಲಾಗಿರುವ ಅಪರಾಧ ಸಂ.247/2009ನ್ನು ಮುಂದಿನ ತನಿಖೆಗಾಗಿ ಸಿ.ಐ.ಡಿ.ಗೆ ವರ್ಗಾಯಿಸಲು ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ.

ಈ ಮೊಕದ್ದಮೆಗೆ ಸಂಬಂಧಿಸಿದ ಕಡತವನ್ನು ಸಿ.ಐ.ಡಿ. ತಂಡಕ್ಕೆ ಹಸ್ತಾಂತರಿಸಲು ಜಿಲ್ಲಾ ಪೊಲೀಸ್ ಅಧೀಕ್ಷಕರು, ತುಮಕೂರು ಇವರು ಸೂಕ್ತ ಕ್ರಮ ತೆಗೆದುಕೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಪಿ.ಶಿವರಾಮ್ ಭಟ್)**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ (ಅಪರಾಧಗಳು)

ಪಿ.ಆರ್. 1271

## COMMERCE AND INDUSTRIES SECRETARIAT

**Sub :-** Approval to the Project Proposal of M/s Rajashree Cements, to enhance the capacity of Captive Power Plant to 185.5 MW.

**Read :-**1) Govt. Order No. CI 30 SPI 2010 dated : 25.02.2010.
2) Proceedings of the 21st State High Level Clearance Committee (SHLCC) meeting held on 29.03.2010..

**Preamble:**

M/s Rajashree Cements, had proposed to enhance Cement Plant Capacity from 4.20 Million MTPA to 8.45 Million MTPA & Captive Power Plant Capacity to 130 MW in Sedam Taluk, Gulbarga District, with an investment of Rs. 3000 crores, generating employment to about 400 persons was approved in 20th SHLCC meeting held on 05-01-2010 and accordingly, G.O. read at (1) above was issued.

In the 21st State High Level Clearance Committee (SHLCC) meeting held on 29-03-2010, the proposal of M/s Rajashree Cements to increase the Captive Power Plant Capacity from 58.5 MW to 185.5 MW is approved.

Hence the following Order.

**Government Order No. CI 30 SPI 2010, Bangalore, dated : 11th May 2010**

Government is pleased to accord in principle approval for the proposal of M/s Rajashree Cements, to increase the captive power plant Capacity from 58.5 MW to 188.5 MW. Incentives, concessions and other conditions remain the same as in G.O. read at (1) above.

By Order and in the name of the Governor of Karnataka

(Aparna Pavate)
Desk Officer (Technical Cell)
Commerce & Industries Department

P.R. 1272

## ಸಹಕಾರ ಸಚಿವಾಲಯ

**ವಿಷಯ** : ರಾಯ್‌ಬಾಗ್ ಸಹಕಾರಿ ಸಕ್ಕರೆ ಕಾರ್ಖಾನೆಗೆ ವಾರ್ಷಿಕ ಮಹಾಸಭೆಗಳನ್ನು ನಡೆಸಲು ಕಾಲಾವಕಾಶ ವಿಸ್ತರಿಸುವ ಬಗ್ಗೆ.

**ಓದಲಾಗಿದೆ** : 1) ಸರ್ಕಾರದ ಆದೇಶ ಸಂಖ್ಯೆ : ಸಇ 22 ಸಸಕಾ 2009, ದಿನಾಂಕ 08–03–2010.
2) ರಾಯ್‌ಬಾಗ್ ಸಹಕಾರಿ ಸಕ್ಕರೆ ಕಾರ್ಖಾನೆ ನಿಯಮಿತ, ರಾಯಬಾಗ್ ಇವರ ಪತ್ರ ಸಂಖ್ಯೆ : ರಾಸಸಕಾ/ಶೇವಣಿ/ನಗದೀಕರಣ/2009–10, ದಿನಾಂಕ 24–03–2010.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಸರ್ಕಾರ ಆದೇಶದಲ್ಲಿ ರಾಯಬಾಗ್ ಸಹಕಾರಿ ಸಕ್ಕರೆ ಕಾರ್ಖಾನೆ ನಿಯಮಿತ, ರಾಯಭಾಗದ 2001 ರಿಂದ 2008ರ ವರೆಗಿನ ಸಾಲುಗಳ ಸರ್ವ ಸದಸ್ಯರ ವಾರ್ಷಿಕ ಸಭೆಯನ್ನು ದಿನಾಂಕ 31–03–2010 ರೊಳಗೆ ನಡೆಸಲು ಕಾಲಾವಕಾಶ ನೀಡಿ ಆದೇಶಿಸಲಾಗಿತ್ತು. ಮೇಲೆ (2)ರ ದಿನಾಂಕ 24–03–2010ರ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು,

ರಾಯಬಾಗ್ ಸಹಕಾರಿ ಸಕ್ಕರೆ ಕಾರ್ಖಾನೆ ನಿಯಮಿತ, ರಾಯಬಾಗ ಈ ಸಂಸ್ಥೆಗೆ ಸರ್ಕಾರದ ಆದೇಶ ಸಂಖ್ಯೆ : ಸಇ 22 ಸಸಕಾ 2009 ದಿನಾಂಕ 08–03–2010 ರಲ್ಲಿ ಸದರಿ ಸಕ್ಕರೆ ಕಾರ್ಖಾನೆಗೆ 2000–01 ನೇ ರಿಂದ 2008–09ನೇ ಸಾಲುಗಳ ವಾರ್ಷಿಕ ಮಹಾ ಸಭೆಯನ್ನು ದಿನಾಂಕ 31–03–2010 ರ ಒಳಗೆ ನಡೆಸಲು ಕಾಲಾವಕಾಶವನ್ನು ವಿಸ್ತರಿಸಿ ಆದೇಶಿಸಲಾಗಿದೆ ಎಂದು ತಿಳಿಸುತ್ತಾ, ಆದರೆ, ರಾಯಬಾಗ್ ಸಹಕಾರಿ ಸಕ್ಕರೆ ಕಾರ್ಖಾನೆಯನ್ನು ಶ್ರೀ ರೇಣುಕಾ ಸುಗರ್ ಲಿ., ಬೆಳಗಾವಿ ಇವರಿಗೆ ಗುತ್ತಿಗೆ ನೀಡಿದ್ದು, ಗುತ್ತಿಗೆದಾರರಿಂದ ಮೊದಲನೇ ಕಂತಿನ ಹಣ ರೂ. 30.00 ಕೋಟಿ ಪಾವತಿಸಿದ್ದು, ಉಚ್ಚ ನ್ಯಾಯಾಲಯದ ತೀರ್ಪಿನ ಮೇರೆಗೆ ಹೆಚ್ಚುವರಿ ಠೇವಣಿ ರೂ. 28.00 ಕೋಟಿಗಳನ್ನು ಭರಿಸಬೇಕಾಗಿದೆ. ಈ ಪೈಕಿ ಗುತ್ತಿಗೆದಾರರು ಆದಾಯ ತೆರಿಗೆ ರೂ. 25,11,60,000–00 ಗಳನ್ನು ಪಾವತಿಸಿರುವರು. ಈ ಹಣದಿಂದ ರೈತರ ಕಬ್ಬಿನ ಬಿಲ್ಲು ಬಾಕಿ, ಬಾಕಿ ವೇತನ, ಭವಿಷ್ಯ ನಿಧಿ, ಅಬಕಾರಿ ತೆರಿಗೆ ಇತ್ಯಾದಿ ಬಾಕಿಗಳನ್ನು ತೀರಿಸುವ ಕೆಲಸ ಬಾಕಿ ಇದೆ. ಇದಲ್ಲದೇ, ಕೇಂದ್ರ ಸರ್ಕಾರದ ನಿಧಿ ಸಾಲ ಇನ್ನಿತರೇ ಬ್ಯಾಂಕಿನ ಸಾಲ ಬಾಕಿ ಇರುತ್ತದೆ. ಈ ಎಲ್ಲಾ ಶಾಸನಬದ್ಧ ಬಾಕಿಗಳನ್ನು ತೀರಿಸುವುದು ಅವಶ್ಯವಾಗಿರುವುದರಿಂದ, ಬಾಕಿಗಳನ್ನು ತೀರಿಸಿದ ನಂತರ ಕಾರ್ಖಾನೆಯ ವಾರ್ಷಿಕ ಮಹಾ ಸಭೆಗಳನ್ನು ಜರುಗಿಸುವುದು ಸೂಕ್ತವೆಂದು ತಿಳಿಸುತ್ತಾ, 2000–01 ರಿಂದ 2008–09ನೇ ಸಾಲಿನ ಸರ್ವ ಸದಸ್ಯರ ವಾರ್ಷಿಕ ಮಹಾ ಸಭೆಗಳನ್ನು 2009–10ನೇ ಸಾಲಿನ ಸರ್ವ ಸದಸ್ಯರು ವಾರ್ಷಿಕ ಮಹಾ ಸಭೆಯೊಂದಿಗೆ ದಿನಾಂಕ 30–09–2010ರ ಒಳಗಾಗಿ ಜರುಗಿಸಲು ಅನುಮತಿ ನೀಡುವಂತೆ ಕೋರಿರುತ್ತಾರೆ.

ಮೇಲಿನ ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರವು ಕೆಳಕಂಡಂತೆ ಆದೇಶಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಇ 06 ಸಸಕಾ 2010, ಬೆಂಗಳೂರು, ದಿನಾಂಕ: 10ನೇ ಮೇ 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಕಲಂ 121 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ರಾಯಬಾಗ್ ಸಹಕಾರಿ ಸಕ್ಕರೆ ಕಾರ್ಖಾನೆ, ರಾಯಬಾಗ್ ಇದರ 2000–01 ರಿಂದ 2008–09ನೇ ಸಾಲಿನ ವಾರ್ಷಿಕ ಮಹಾ ಸಭೆಯನ್ನು ದಿನಾಂಕ 30–09–2010 ರೊಳಗೆ ನಡೆಸಲು ಕಾಲಾವಕಾಶವನ್ನು ವಿಸ್ತರಿಸಿ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಕಲಂ 27(1)ರ ಉಪ ಬಂಧಗಳನ್ನು ಮಾರ್ಪಡಿಸಿ ಅನುಮತಿ ನೀಡಲಾಗಿದೆ.

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಕಲಂ 27(1)ರ ಉಪ ಬಂಧಕ್ಕೆ ಮಾಡಿದ ಈ ಮಾರ್ಪಾಡು ದಿನಾಂಕ 30–09–2010ರ ವರೆಗೆ ಜಾರಿಯಲ್ಲಿರತಕ್ಕದ್ದು. ಈ ಅವಧಿ ಮುಗಿದ ನಂತರ ಈ ಆದೇಶದ ಮಾರ್ಪಡಿಗೆ ಮೊದಲು ಜಾರಿಯಲ್ಲಿದಂತೆ ಸದರಿ 27(1)ರ ಕಲಂನ ಉಪ ಬಂಧಗಳು ಪುನಃ ಜಾರಿಗೆ ಬರತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**(ನಂಜುಂಡಪ್ಪ)**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 1308 ಸಹಕಾರ ಇಲಾಖೆ

## ಸಹಕಾರ ಸಚಿವಾಲಯ

**ವಿಷಯ** : ದಿ ಮಾರ್ಕಂಡೇಯ ಸಹಕಾರಿ ಸಕ್ಕರೆ ಕಾರ್ಖಾನೆ ನಿ., ಕಾಕತಿ, ಬೆಳಗಾವಿ ಇದರ 2008–09ರ ವಾರ್ಷಿಕ ಸಾಮಾನ್ಯ ಸಭೆಯನ್ನು ಜರುಗಿಸಲು ಕಾಲಾವಕಾಶ ನೀಡುವ ಕುರಿತು.

**ಓದಲಾಗಿದೆ** : ಆಯುಕ್ತರು, ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶನಾಲಯ, ಬೆಂಗಳೂರು ರವರ ಪತ್ರ ಸಂಖ್ಯೆ : ಡಿಎಸ್‌ಕೆ/ಇಎಸ್‌ಟಿಎಸ್/ಎಜಿಎಂ/364/2009–10, ದಿನಾಂಕ : 03–03–2010.

**ಪ್ರಸ್ತಾವನೆ :**

ಮೇಲೆ ಓದಲಾದ ದಿನಾಂಕ 03–03–2010ರ ಪತ್ರದಲ್ಲಿ ಆಯುಕ್ತರು, ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶನಾಲಯ, ಬೆಂಗಳೂರು ಇವರು ದಿ ಮಾರ್ಕೆಂಡೇಯ ಸಹಕಾರಿ ಸಕ್ಕರೆ ಕಾರ್ಖಾನೆ ನಿ., ಕಾಕತಿ, ಬೆಳಗಾವಿ ಇದರ ಸಕ್ಕರೆ ಘಟಕವನ್ನು ಪ್ರಾರಂಭಿಸುವ ಉದ್ದೇಶದಿಂದ ಕಾರ್ಖಾನೆಯ ಎಲ್ಲರೂ ಮಗ್ನರಾಗಿರುವುದರಿಂದ ಮತ್ತು ಕಾರ್ಖಾನೆಗೆ ಅವಶ್ಯಕವಿರುವ ಹೆಚ್ಚಿನ ಪಾಲು ಬಂಡವಾಳವನ್ನು ಕ್ರೊಢೀಕರಿಸುವಲ್ಲಿ ಎಲ್ಲಾ ಸಿಬ್ಬಂದಿ ವರ್ಗದವರು ಹಾಗೂ ಆಡಳಿತ ಮಂಡಳಿಯವರೆಲ್ಲರೂ ಕಾರ್ಯ ಮಗ್ನರಾಗಿದ್ದರಿಂದ ಇದರ 2008–09ನೇ ಸಾಲಿನ ವಾರ್ಷಿಕ ಮಹಾ ಸಭೆಯನ್ನು ದಿನಾಂಕ 31–03–2010ರ ಒಳಗೆ ಜರುಗಿಸುವ ಬದಲು ದಿನಾಂಕ 30–09–2010ರ ಒಳಗೆ ಜರುಗಿಸಲು ಅನುಮತಿ ನೀಡುವಂತೆ ದಿನಾಂಕ 30–01–2010ರ ಆಡಳಿತ ಮಂಡಳಿಯ ಸಭೆಯಲ್ಲಿ ನಿರ್ಣಯಿಸಲಾಗಿದ್ದು, ಅದರಂತೆ 2008–09ನೇ ಸಾಲಿನ ವಾರ್ಷಿಕ ಮಹಾ ಸಭೆಯನ್ನು ದಿನಾಂಕ 30–09–2010ರ ಒಳಗೆ ನಡೆಸಲು ಕೋರಿರುತ್ತಾರೆ.

ಮೇಲಿನ ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರವು ಕೆಳಕಂಡಂತೆ ಆದೇಶಿದೆ.

**ಸರ್ಕಾರಿ ಆದೇಶ ಸಂಖ್ಯೆ : ಸಇ 04 ಸಸಕಾ 2010, ಬೆಂಗಳೂರು, ದಿನಾಂಕ: 7ನೇ ಮೇ, 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಕಲಂ 121 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ದಿ ಮಾರ್ಕಂಡೇಯ ಸಹಕಾರಿ ಸಕ್ಕರೆ ಕಾರ್ಖಾನೆ ನಿ., ಕಾಕತಿ, ಬೆಳಗಾವಿ ಇದರ 2008-09ನೇ ಸಾಲಿನ ವಾರ್ಷಿಕ ಮಹಾ ಸಭೆಯನ್ನು ದಿನಾಂಕ 30-09-2010ರ ರೊಳಗೆ ನಡೆಸಲು ಕಾಲಾವಕಾಶವನ್ನು ವಿಸ್ತರಿಸಿ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಕಲಂ 27(1) ರ ಉಪ ಬಂಧಗಳನ್ನು ಮಾರ್ಪಡಿಸಿ ಅನುಮತಿ ನೀಡಲಾಗಿದೆ.

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಕಲಂ 27(1)ರ ಉಪ ಬಂಧಕ್ಕೆ ಮಾಡಿದ ಈ ಮಾರ್ಪಾಡು ದಿನಾಂಕ 30-09-2010ರ ವರೆಗೆ ಜಾರಿಯಲ್ಲಿರತಕ್ಕದ್ದು. ಈ ಅವಧಿ ಮುಗಿದ ನಂತರ ಈ ಆದೇಶದ ಮಾರ್ಪಡಿಗೆ ಮೊದಲು ಜಾರಿಯಲ್ಲಿದಂತೆ ಸದರಿ 27(1)ರ ಕಲಂನ ಉಪ ಬಂಧಗಳು ಪುನಃ ಜಾರಿಗೆ ಬರತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**(ನಂಜುಂಡಪ್ಪ)**
ಸರ್ಕಾರದ ಅಧೀನ ಕಾರ್ಯದರ್ಶಿ
ಸಹಕಾರ ಇಲಾಖೆ

ಪಿ.ಆರ್. 1316

**ಒಳಾಡಳಿತ ಸಚಿವಾಲಯ**

**ವಿಷಯ** : ಆಂತರಿಕ ಭದ್ರತಾ ಘಟಕದಲ್ಲಿ ಹಾಗೂ ಎ.ಎನ್.ಎಫ್. ಪಡೆಯಲ್ಲಿ ಕಾರ್ಯನಿರ್ವಹಿಸುತ್ತಿರುವ ಪೋಲೀಸ್ ಸಿಬ್ಬಂದಿ ಮತ್ತು ಲಿಪಿಕ ವರ್ಗದ ನೌಕರ ವರ್ಗಕ್ಕೆ ಸಮಾನ ದರದಲ್ಲಿ ವಿಶೇಷ ಕರ್ತವ್ಯ ಭತ್ಯೆ ಮಂಜೂರು ಮಾಡುವ ಕುರಿತು.

**ಓದಲಾಗಿದೆ** : ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರ ಪತ್ರದ ಸಂಖ್ಯೆ ಆರ್.ಎಲ್.ಎನ್./(1)/11/2000-01, ದಿನಾಂಕ 06-12-2009.

**ಪ್ರಸ್ತಾವನೆ :**

ಮೇಲೆ ಓದಲಾದ ಪತ್ರದಲ್ಲಿ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರವರು 5ನೇ ವೇತನ ಆಯೋಗದ ಶಿಫಾರಸ್ಸಿನಂತೆ ಸರ್ಕಾರದ ಆದೇಶ ಸಂಖ್ಯೆ : ಎಫ್‌ಡಿ 8 ಎಸ್‌ಆರ್‌ಪಿ 2007, ದಿನಾಂಕ 16-05-2007ರಲ್ಲಿ ರಾಜ್ಯ ಸರ್ಕಾರವು ಸರ್ಕಾರಿ ನೌಕರರಿಗೆ ಹೊಸ ವೇತನ ಶ್ರೇಣಿಯನ್ನು ಜಾರಿ ಮಾಡಿದ್ದು ನಕ್ಸಲ್ ನಿಗ್ರಹ ಪಡೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಪೋಲೀಸ್ ಸಿಬ್ಬಂದಿ ಮತ್ತು ಲಿಪಿಕ ಸಿಬ್ಬಂದಿಗಳಿಗೆ ಮೂಲ ವೇತನದ ಶೇ. 50ರಷ್ಟು ವಿಶೇಷ ಭತ್ಯೆಯನ್ನು ಹೊಸ ವೇತನ ಶ್ರೇಣಿಯಲ್ಲಿ ಮಂಜೂರು ಮಾಡುವಂತೆ ಕೋರಿರುತ್ತಾರೆ.

ಈ ಹಿಂದೆ ಸರ್ಕಾರಿ ಆದೇಶ ಸಂಖ್ಯೆ : ಹೆಚ್‌ಡಿ 1 ಪಿಒಪಿ 2005 (ಭಾಗ) ದಿನಾಂಕ 21-05-2005ರಲ್ಲಿ ರಾಜ್ಯದ ನಕ್ಸಲೈಟ್ ಚಟುವಟಿಕೆಗಳ ನಿಗ್ರಹಕ್ಕಾಗಿ ಮರುನಿಯೋಜನೆಗೊಂಡ ಎ.ಎನ್.ಎಫ್. ಪಡೆಯ ಅಧಿಕಾರಿ ಹಾಗೂ ಸಿಬ್ಬಂದಿಗಳಿಗೆ 1999ರ ವೇತನ ಶ್ರೇಣಿಯಲ್ಲಿನ ಅವರ ಹುದ್ದೆಗಳಿಗೆ ಅನ್ವಯಿಸುವ ಮೂಲ ವೇತನದ ಶೇ. 50ರಷ್ಟು ವಿಶೇಷ ಭತ್ಯೆಯನ್ನು (Special Allowance) ಮಂಜೂರು ಮಾಡಲಾಗಿತ್ತು ಮತ್ತು ಸರ್ಕಾರಿ ಆದೇಶ ಸಂಖ್ಯೆ : ಹೆಚ್‌ಡಿ 208 ಪಿಒಪಿ 2008, ದಿನಾಂಕ 12-12-2008ರಲ್ಲಿ ಹೊಸದಾಗಿ ಪ್ರತ್ಯೇಕ ರಾಜ್ಯ ಮಟ್ಟದ ಆಂತರಿಕ ಭದ್ರತಾ ವಿಭಾಗವನ್ನು ಸ್ಥಾಪಿಸಲು ಮಂಜೂರಾತಿ ನೀಡಿದ್ದು ಸದರಿ ಆಂತರಿಕ ಭದ್ರತಾ ಘಟಕದಲ್ಲಿ ಕಾರ್ಯನಿರ್ವಹಿಸುತ್ತಿರುವ ಪೋಲೀಸ್ ಸಿಬ್ಬಂದಿ ಮತ್ತು ಲಿಪಿಕ ಸಿಬ್ಬಂದಿ ವರ್ಗದವರಿಗೆ ಮೂಲ ವೇತನದ ಶೇ. 50 ರಷ್ಟನ್ನು ಹೆಚ್ಚುವರಿ ವೇತನವನ್ನಾಗಿ (Additional Pay) ನೀಡಲು ಮಂಜೂರಾತಿ ನೀಡಲಾಗಿದೆ.

ಮೇಲ್ಕಂಡ ಸನ್ನಿವೇಶದಲ್ಲಿ ಈ ಹಿಂದೆ ಸರ್ಕಾರಿ ಆದೇಶ ಸಂಖ್ಯೆ : ಹೆಚ್‌ಡಿ 1 ಪಿಒಪಿ 2005 (ಭಾಗ), ದಿನಾಂಕ 21-05-2005ರಲ್ಲಿ ರಾಜ್ಯದ ನಕ್ಸಲೆಟ್ ಚಟುವಟಿಕೆಗಳ ನಿಗ್ರಹಕ್ಕಾಗಿ ಮರುನಿಯೋಜನೆಗೊಂಡ ಎ.ಎನ್.ಎಫ್. ಪಡೆಯ ಅಧಿಕಾರಿ ಹಾಗೂ ಸಿಬ್ಬಂದಿಗಳಿಗೆ ಮಂಜೂರು ಮಾಡಿದ 1999ರ ವೇತನ ಶ್ರೇಣಿಯಲ್ಲಿ ಅವರ ಹುದ್ದೆಗಳಿಗೆ ಅನ್ವಯಿಸುವ ಮೂಲ ವೇತನದ ಶೇ. 50ರಷ್ಟು ವಿಶೇಷ ಭತ್ಯೆ (Special Allowance) ಹಾಗೂ ಸರ್ಕಾರಿ ಆದೇಶ ಸಂಖ್ಯೆ : ಹೆಚ್‌ಡಿ 208 ಪಿಒಪಿ 2008, ದಿನಾಂಕ 12-12-2008ರಲ್ಲಿ ಆಂತರಿಕ ಭದ್ರತಾ ಘಟಕದಲ್ಲಿ ಕಾರ್ಯನಿರ್ವಹಿಸುತ್ತಿರುವ ಅಧಿಕಾರಿ ಮತ್ತು ಸಿಬ್ಬಂದಿ ವರ್ಗದವರಿಗೆ ಮಂಜೂರು ಮಾಡಿದ್ದ ಅವರ ಮೂಲ ವೇತನದ ಶೇ. 50ರಷ್ಟನ್ನು ಹೆಚ್ಚುವರಿ ವೇತನದ (Additional Pay) ಬದಲಾಗಿ ಆಂತರಿಕಾ ಭದ್ರತಾ ಘಟಕದಲ್ಲಿ ಮತ್ತು ಎ.ಎನ್.ಎಫ್. ಪಡೆಯಲ್ಲಿ ಕಾರ್ಯನಿರ್ವಹಿಸುತ್ತಿರುವ ಪೋಲೀಸ್ ಸಿಬ್ಬಂದಿಗೆ ಮತ್ತು ಲಿಪಿಕ ವರ್ಗದ ನೌಕರ ವರ್ಗಕ್ಕೆ ಏಕರೂಪವಾಗಿ ಸರ್ಕಾರಿ ಆದೇಶ ಸಂಖ್ಯೆ : ಎಫ್‌ಡಿ 40 ಎಸ್‌ಆರ್‌ಪಿ 2007 (ii) ದಿನಾಂಕ 13-03-2008 ರನ್ವಯ ಕ್ರಮವಾಗಿ ಪೂರ್ವ ಪರಿಷ್ಕೃತ ವೇತನ ಶ್ರೇಣಿಯ ಮೂಲ ವೇತನದ ಶೇಕಡಾ 50 ಮತ್ತು

ಶೇಕಡಾ 20 ದರದಲ್ಲಿ ವಿಶೇಷ ಕರ್ತವ್ಯ ಭತ್ಯೆಯನ್ನು (Special Duty Allowance) ಮಂಜೂರು ಮಾಡುವ ಬಗ್ಗೆ ಸರ್ಕಾರದಲ್ಲಿ ಪರಿಶೀಲಿಸಲಾಯಿತು.

ಅದರಂತೆ ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಹೆಚ್‌ಡಿ 110 ಪಿಓಪಿ 2008, ಬೆಂಗಳೂರು, ದಿನಾಂಕ: 18ನೇ ಮೇ, 2010**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳ ಹಿನ್ನೆಲೆಯಲ್ಲಿ, ಈ ಹಿಂದೆ ಸರ್ಕಾರಿ ಆದೇಶ ಸಂಖ್ಯೆ : ಹೆಚ್‌ಡಿ 1 ಪಿಓಪಿ 2005 (ಭಾಗ), ದಿನಾಂಕ 21-05-2005ರಲ್ಲಿ ರಾಜ್ಯದ ನಕ್ಸಲೈಟ್ ಚಟುವಟಿಕೆಗಳ ನಿಗ್ರಹಕ್ಕಾಗಿ ಮರುನಿಯೋಜನೆಗೊಂಡ ಎ.ಎನ್.ಎಫ್. ಪಡೆಯ ಅಧಿಕಾರಿ ಹಾಗೂ ಸಿಬ್ಬಂದಿಗಳಿಗೆ ಮಂಜೂರು ಮಾಡಿದ 1999ರ ವೇತನ ಶ್ರೇಣಿಯಲ್ಲಿ ಅವರ ಹುದ್ದೆಗಳಿಗೆ ಅನ್ವಯಿಸುವ ಮೂಲ ವೇತನದ ಶೇ. 50 ರಷ್ಟು ವಿಶೇಷ ಭತ್ಯೆ (Special Allowance) ಹಾಗೂ ಸರ್ಕಾರಿ ಆದೇಶ ಸಂಖ್ಯೆ : ಹೆಚ್‌ಡಿ 208 ಪಿಓಪಿ 2008, ದಿನಾಂಕ 12-12-2008ರಲ್ಲಿ ಆಂತರಿಕ ಭದ್ರತಾ ಘಟಕದಲ್ಲಿ ಕಾರ್ಯನಿರ್ವಹಿಸುತ್ತಿರುವ ಅಧಿಕಾರಿ ಮತ್ತು ಸಿಬ್ಬಂದಿ ವರ್ಗದವರಿಗೆ ಮಂಜೂರು ಮಾಡಿದ್ದ ಅವರ ಮೂಲ ವೇತನದ ಶೇ. 50 ರಷ್ಟನ್ನು ಹೆಚ್ಚುವರಿ ವೇತನದ (Additional Pay) ಬದಲಾಗಿ ಆಂತರಿಕ ಭದ್ರತಾ ಘಟಕದಲ್ಲಿ ಮತ್ತು ಎ.ಎನ್.ಎಫ್. ಪಡೆಯಲ್ಲಿ ಕಾರ್ಯನಿರ್ವಹಿಸುತ್ತಿರುವ ಪೊಲೀಸ್ ಸಿಬ್ಬಂದಿಗೆ ಮತ್ತು ಲಿಪಿಕ ವರ್ಗದ ನೌಕರ ವರ್ಗಕ್ಕೆ ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 40 ಎಸ್‌ಆರ್‌ಪಿ 2007 (ii) ದಿನಾಂಕ : 13-03-2008 ರನ್ವಯ ಕ್ರಮವಾಗಿ ಪೂರ್ವ ಪರಿಷ್ಕೃತ ವೇತನ ಶ್ರೇಣಿಯ ಮೂಲ ವೇತನದ ಶೇಕಡಾ 50 ಮತ್ತು ಶೇಕಡಾ 20ರ ದರದಲ್ಲಿ ವಿಶೇಷ ಕರ್ತವ್ಯ ಭತ್ಯೆಯನ್ನು (Special Duty Allowance) ಮಂಜೂರು ಮಾಡಲು ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ.

ಮುಂದುವರೆದು ಆಂತರಿಕ ಭದ್ರತಾ ಘಟಕದಲ್ಲಿ ಮತ್ತು ಎ.ಎಲ್.ಎಫ್. ಪಡೆಯಲ್ಲಿ ಕಾರ್ಯನಿರ್ವಹಿಸುತ್ತಿರುವ ಪೊಲೀಸ್ ಸಿಬ್ಬಂದಿಗೆ ಕ್ರಮವಾಗಿ ಸರ್ಕಾರಿ ಆದೇಶ ಸಂಖ್ಯೆ : ಹೆಚ್‌ಡಿ 208 ಪಿಓಪಿ 2008, ದಿನಾಂಕ 12-12-2008ರಲ್ಲಿ ಮತ್ತು ಸರ್ಕಾರಿ ಆದೇಶ ಸಂಖ್ಯೆ : ಹೆಚ್‌ಡಿ 1 ಪಿಓಪಿ 2005 (ಭಾಗ), ದಿನಾಂಕ 21-05-2005ರಲ್ಲಿ ಮಂಜೂರು ಮಾಡಿರುವ ಇತರ ಪ್ರೋತ್ಸಾಹಗಳನ್ನು ಸದರಿ ಆದೇಶಗಳನ್ನು ಮಂಜೂರು ಮಾಡಿರುವುದನ್ನು ಮುಂದುವರೆಸಲಾಗಿದೆ.

ಸದರಿ ಘಟಕಗಳಲ್ಲಿ ಕೆಲಸ ನಿರ್ವಹಿಸುತ್ತಿರುವ ಐಪಿಎಸ್ ವೃಂದದ ಅಧಿಕಾರಿಗಳಿಗೆ ಸಂಬಂಧಪಟ್ಟಂತೆ ಪ್ರತ್ಯೇಕ ಅದೇಶ ಹೊರಡಿಸಲಾಗುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : FD 10 EXP 11/09 ದಿನಾಂಕ : 12-01-2010ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**(ಬಿ. ಎಂ. ಲಕ್ಷ್ಮೀನಾರಾಯಣ)**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ (ಪೊಲೀಸ್ ವೆಚ್ಚ)

ಪಿ.ಆರ್. 1317

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ** : "ಕರ್ನಾಟಕ ರಾಜ್ಯ ಸ್ವಾತಂತ್ರ್ಯ ಹೋರಾಟಗಾರರ ಕಲ್ಯಾಣ ನಿಯಮಗಳು, 1969"ರ ನಿಯಮ 8ಕ್ಕೆ ತಿದ್ದುಪಡಿ ಮಾಡುವ ಬಗ್ಗೆ.

**ಪ್ರಸ್ತಾವನೆ :**

"ಕರ್ನಾಟಕ ರಾಜ್ಯ ಸ್ವಾತಂತ್ರ್ಯ ಹೋರಾಟಗಾರರ ಕಲ್ಯಾಣ ನಿಯಮಗಳು, 1969" ಅನ್ನು 1967ರಲ್ಲಿ ರೂಪಿಸಲಾಯಿತು ಮತ್ತು ಕಾಲಕಾಲಕ್ಕೆ ತಿದ್ದುಪಡಿ ಮಾಡಲಾಯಿತು. ಆದೇಶ ಸಂಖ್ಯೆ : ಸಿಆಸುಇ 546 ಪಿಎಫ್‌ಎಸ್ 79, ದಿನಾಂಕ 01-07-1981ರಲ್ಲಿ, ಈ ನಿಯಮವನ್ನು "ಕರ್ನಾಟಕ ರಾಜ್ಯ ಸ್ವಾತಂತ್ರ್ಯ ಸೈನಿಕ ಸನ್ಮಾನ ಗೌರವಧನ ಯೋಜನೆ" ಎಂಬುದಾಗಿ ಬದಲಾಯಿಸಲಾಯಿತು. ರಾಜ್ಯ ಸ್ವಾತಂತ್ರ್ಯ ಹೋರಾಟಗಾರರ ಗೌರವಧನವನ್ನು ಈ ನಿಯಮಗಳಿಗನುಸಾರವಾಗಿ ನೀಡಲಾಗುತ್ತಿದೆ.

ಆದೇಶ ಸಂಖ್ಯೆ : ಸಿಆಸುಇ 34 ಪಿಎಫ್‌ಜಿ 92, ದಿನಾಂಕ 02-06-1992ರಲ್ಲಿ ಕರ್ನಾಟಕ ರಾಜ್ಯ ಸ್ವಾತಂತ್ರ್ಯ ಹೋರಾಟಗಾರರ ಕಲ್ಯಾಣ ನಿಯಮಗಳು, 1969ರ ಮೇರೆಗೆ ಗೌರವಧನ ಮಂಜೂರು ಮಾಡುವುದಕ್ಕಾಗಿ ಅರ್ಜಿಗಳನ್ನು ಸಲ್ಲಿಸಲು 30-06-1992ನ್ನು ಕೊನೆ ದಿನಾಂಕವನ್ನಾಗಿ ನಿಗದಿಪಡಿಸಲಾಗಿತ್ತು. ದಿನಾಂಕ 01-01-1983 ರಿಂದ ದಿನಾಂಕ 30-06-1992ರ ನಡುವೆ ಸ್ವೀಕರಿಸಲಾದ ಅರ್ಜಿಗಳಿಗೆ ರಾಜ್ಯ ಸ್ವಾತಂತ್ರ್ಯ ಹೋರಾಟಗಾರರ ಗೌರವಧನವನ್ನು ಆದೇಶದ ದಿನಾಂಕದಿಂದ ಮಂಜೂರು ಮಾಡಲಾಗಿರುತ್ತದೆ. ಆದರೆ, ರಾಜ್ಯದ ನಿಯಮಗಳಲ್ಲಿ ನಿರ್ದಿಷ್ಟ ಉಪಬಂಧವಿಲ್ಲದಿರುವುದರಿಂದ, ನ್ಯಾಯಾಲಯದಲ್ಲಿ ದಾಖಲಾಗಿದ್ದ ಕೆಲವು ಪ್ರಕರಣಗಳಲ್ಲಿ, ಅರ್ಜಿ ದಿನಾಂಕದಿಂದ ಗೌರವಧನವನ್ನು ನೀಡುವಂತೆ ಕರ್ನಾಟಕ ಉಚ್ಚ ನ್ಯಾಯಾಲಯವು ನಿರ್ದೇಶಿಸಿದ್ದರಿಂದ, ಅನೇಕ ಮೊಕದ್ದಮೆಗಳಲ್ಲಿ ದೊಡ್ಡ ಮೊತ್ತದ ಬಾಕಿಗಳನ್ನು ಕ್ಲೇಮ್ ಮಾಡಲಾಗಿತ್ತು.

ನಿಯಮಗಳ ಮಟ್ಟಿಗೂ ಸಹ, ಈಗಿರುವ ನಿಯಮಗಳಲ್ಲಿ ಅಸ್ಪಷ್ಟತೆ ಇದ್ದು, ಅದರಲ್ಲಿ ಗೌರವಧನವನ್ನು ಆದೇಶದ ದಿನಾಂಕದಿಂದ ಮಾತ್ರ ಸಂದಾಯ ಮಾಡಬೇಕೆಂದು ನಿರ್ದಿಷ್ಟವಾಗಿ ಸ್ಪಷ್ಟೀಕರಿಸಿರುವುದಿಲ್ಲ. ಈ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಸ್ವಾತಂತ್ರ್ಯ ಹೋರಾಟಗಾರರ ಕಲ್ಯಾಣ ನಿಯಮಗಳು 1969ರ ನಿಯಮ 8ಕ್ಕೆ ತಿದ್ದುಪಡಿ ತರಲು ಸರ್ಕಾರವು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ ಸಂಖ್ಯೆ : ಸಿಆಸುಇ10 ಪಿಎಫ್‌ಜಿ 2006, ಬೆಂಗಳೂರು, ದಿನಾಂಕ: 18ನೇ ಮೇ, 2010**

ಪ್ರಸ್ತಾವನೆಯಲ್ಲಿ ವಿವರಿಸಿದಂತೆ, ಸರ್ಕಾರವು "ಕರ್ನಾಟಕ ರಾಜ್ಯ ಸ್ವಾತಂತ್ರ್ಯ ಹೋರಾಟಗಾರರ ಕಲ್ಯಾಣ ನಿಯಮಗಳು, 1969"ರ ನಿಯಮ 8ಕ್ಕೆ ಈ ಕೆಳಗಿನಂತೆ ತಿದ್ದುಪಡಿ ಮಾಡಿ ಆದೇಶಿಸಿದೆ.

ಪಿಂಚಣಿಯ ಪ್ರಾರಂಭದ ದಿನಾಂಕ :- ಈ ನಿಯಮಗಳ ಅಡಿಯಲ್ಲಿ ನೀಡಲಾದ ಪಿಂಚಣಿ ಪ್ರಾರಂಭವು ಆದೇಶವನ್ನು ಹೊರಡಿಸಿದ ದಿನಾಂಕದಿಂದ ಜಾರಿಗೆ ಬರತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**(ಹೆಚ್. ಜಯರಾಮ್)**
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ)
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ
(ಅಸು-ರಾಜಕೀಯ ವಿಶ್ರಾಂತಿ ವೇತನ-1)

ಪಿ.ಆರ್. 1318

## ಪಶುಸಂಗೋಪನೆ ಮತ್ತು ಮೀನುಗಾರಿಕೆ ಸಚಿವಾಲಯ

**ವಿಷಯ** : ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆಯಲ್ಲಿ ಯೋಜನೇತರ ಲೆಕ್ಕಶೀರ್ಷಿಕೆ ಅಡಿಯಲ್ಲಿನ ಹಂಗಾಮಿ ಹುದ್ದೆಗಳನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ** : 1) ಅದೇಶ ಸಂಖ್ಯೆ : ಪಸಂಮೀ 167 ಪಸಸೇ 2008, ದಿನಾಂಕ 11-05-2009

2) ಪತ್ರ ಸಂಖ್ಯೆ : ಆಪಸಂ/ಸಿಬ್ಬಂದಿ-1(ಅ)/ವಿವ-1/(ಭಾಗ-1)/09-10, ದಿನಾಂಕ : 12-04-2010.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿ ಯೋಜನೇತರ ಲೆಕ್ಕಶೀರ್ಷಿಕೆ ಅಡಿಯಲ್ಲಿನ ವಿವಿಧ ವೃಂದಗಳ ಒಟ್ಟು 1004 ಹಂಗಾಮಿ ಹುದ್ದೆಗಳನ್ನು ಇಲಾಖಾ ಹಿತದೃಷ್ಟಿಯಿಂದ ದಿನಾಂಕ : 01-04-2009 ರಿಂದ ದಿನಾಂಕ 31-03-2010 ರವರೆಗೆ ಒಂದು ವರ್ಷದ ಅವಧಿಗೆ ಮುಂದುವರೆಸಲು ಮಂಜೂರಾತಿ ನೀಡಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಪತ್ರದಲ್ಲಿ ಆಯುಕ್ತರು, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ, ಬೆಂಗಳೂರುರವರು ಹಂಗಾಮಿ ಹುದ್ದೆಗಳ ಮುಂದುವರೆಸುವಿಕೆಯ ಅವಧಿ ದಿನಾಂಕ 31-03-2010ಕ್ಕೆ ಮುಕ್ತಾಯಗೊಂಡಿದ್ದು, 1004 ಹುದ್ದೆಗಳ ಪೈಕಿ ಲೆಕ್ಕಶೀರ್ಷಿಕೆ "2403-101-01 ದೊಡ್ಡರೋಗ ನಿರ್ಮೂಲನಾ ಲಸಿಕೆ ಯೋಜನೆ 201-ಪಶುವೈದ್ಯ ಸೇವೆ ಮತ್ತು ಪ್ರಾಣಿ ಆರೋಗ್ಯ ಯೋಜನೆ" ಅಡಿಯಲ್ಲಿನ 14 ಹುದ್ದೆಗಳನ್ನು (ಪಶುವೈದ್ಯಕೀಯ ಪರೀಕ್ಷಕ ವೃಂದದ 12 ಹುದ್ದೆ ಹಾಗೂ ವಾಹನ ಚಾಲಕ ವೃಂದದ 2 ಹುದ್ದೆ) ಜಿಲ್ಲಾ ಪಂಚಾಯತ್ ವ್ಯಾಪ್ತಿಗೆ ಸ್ಥಳಾಂತರಗೊಂಡಿರುವುದರಿಂದ ಅವುಗಳನ್ನು ಬಿಟ್ಟು ಉಳಿದ 990 ಹಂಗಾಮಿ ಹುದ್ದೆಗಳನ್ನು ಮುಂದುವರೆಸುವುದು ಅವಶ್ಯಕವಾಗಿರುತ್ತದೆಂದು ತಿಳಿಸಿರುತ್ತಾರೆ. 990 ಹಂಗಾಮಿ ಹುದ್ದೆಗಳ ಪೈಕಿ 111 ಹುದ್ದೆಗಳು ಕೇಂದ್ರ ಕಛೇರಿಯಲ್ಲಿ, 52 ಹುದ್ದೆಗಳು ಸಾಂಖ್ಯಿಕ ಸಂಗ್ರಹ ಮತ್ತು ಅಂಕಿ ಅಂಶ ಕಛೇರಿಯಲ್ಲಿದ್ದು ಉಳಿದೆಲ್ಲಾ ಹುದ್ದೆಗಳನ್ನು ರಾಜ್ಯವಲಯದ ಜಾನುವಾರು ಕ್ಷೇತ್ರಗಳಲ್ಲಿನ ಹುದ್ದೆಗಳಾಗಿರುತ್ತದೆಂದು, ಜಾನುವಾರು ಕ್ಷೇತ್ರಗಳಲ್ಲಿ ಉತ್ತಮ ದೇಶಿಯ, ವಿದೇಶಿಯ ಮಿಶ್ರತಳಿಗಳ ವೀರ್ಯ ಸಂಸ್ಕರಿಸಲು, ರೈತರ ರಾಸುಗಳ ಕೃತಕ ಗರ್ಭಧಾರಣೆಗೆ ಬೇಕಾದ ವೀರ್ಯವನ್ನು ಉತ್ಪಾದಿಸಲು, ತಳಿಗಳನ್ನು ಸಂರಕ್ಷಿಸಲು ವೀರ್ಯ ನಳಿಕೆಗಳನ್ನು ಸರಬರಾಜು ಕಾರ್ಯಕ್ರಮಗಳಿಗಾಗಿ ರೈತರಿಗೆ ಪಶುಪಾಲನೆ ಬಗ್ಗೆ ತರಬೇತಿ ನೀಡುವುದು. ಹೈನುಗಾರಿಕೆ ಶಿಕ್ಷಣಾರ್ಥಿಗಳಿಗೆ ತರಬೇತಿ, ಜಾನುವಾರು ಹಾಗೂ ಕುಕ್ಕುಟ ತಳಿಗಳ ಸಂವರ್ಧನೆ ಚಟುವಟಿಕೆಗಳನ್ನು ನಿರ್ವಹಿಸಲು ಹಾಗೂ ಮೇವು ಬೆಳೆಗಳ ಮಿನಿಕಿಟ್ ಉತ್ಪಾದನೆ, ಸುಧಾರಿತ ತಳಿಗಳ ಹುಲ್ಲಿನ ಬೇರು, ಬೀಜವನ್ನು ರೈತರಿಗೆ ಸರಬರಾಜು ಮಾಡಲು, ಪ್ರಾತ್ಯಕ್ಷಿಕೆಗಳನ್ನು ಪ್ರದರ್ಶಿಸಲು, ಇಲಾಖಾ ಅಧಿಕಾರಿ/ಸಿಬ್ಬಂದಿಗೆ ಪುನಶ್ಚೇತನ ತರಬೇತಿ ಹಮ್ಮಿಕೊಳ್ಳಲು, ಹೊಸದಾಗಿ ನೇಮಕಗೊಂಡ ಪಶುವೈದ್ಯಕೀಯ ಪರೀಕ್ಷಕರಿಗೆ ತರಬೇತಿ ನೀಡುವ ಕಾರ್ಯಕ್ರಮಗಳನ್ನು ನಿರ್ವಹಿಸಲು ಸದರಿ 990 ಹಂಗಾಮಿ ಹುದ್ದೆಗಳನ್ನು ದಿನಾಂಕ 01-04-2010 ರಿಂದ 2 ವರ್ಷದ ಅವಧಿಗೆ ಇಲ್ಲವೇ ಖಾಯಂ ಆಗಿ ಮುಂದುವರೆಸಲು ಮಂಜೂರಾತಿ ನೀಡುವಂತೆ ಕೋರಿರುತ್ತಾರೆ.

ಆಯುಕ್ತರ ಪ್ರಸ್ತಾವನೆಯನ್ನು ಪರಿಶೀಲಿಸಲಾಯಿತು. 990 ಹಂಗಾಮಿ ಹುದ್ದೆಗಳು ಕೇಂದ್ರ ಕಛೇರಿ, ಸಾಂಖ್ಯಿಕ ಸಂಗ್ರಹ, ಅಂಕಿ ಅಂಶ ಕಛೇರಿ ಹಾಗೂ ಜಾನುವಾರು ಕ್ಷೇತ್ರಗಳಲಿದ್ದು ಇಲಾಖೆಯ ವಿವಿಧ ಯೋಜನೇತರ ಲೆಕ್ಕಶೀರ್ಷಿಕೆ ವ್ಯಾಪ್ತಿಗೆ ಒಳಪಟ್ಟಿದೆ. ಸದರಿ ಹುದ್ದೆಗಳನ್ನು ಇಲಾಖಾ ಕಾರ್ಯಕ್ರಮಗಳ ದೃಷ್ಟಿಯಿಂದ ದೀರ್ಘಕಾಲದಿಂದ ಅಂದರೆ ಸುಮಾರು 30 ವರ್ಷಗಳಿಂದ ಕಾಲಕಾಲಕ್ಕೆ ಮುಂದುವರೆಸಿಕೊಂಡು ಬರಲಾಗುತ್ತಿದೆ. ಇಲಾಖೆಯ ಅಭಿವೃದ್ಧಿ ಕಾರ್ಯಕ್ರಮಗಳನ್ನು

ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಹಾಗೂ ಜಾನುವಾರು ಕ್ಷೇತ್ರಗಳಲ್ಲಿನ ವಿವಿಧ ಕೆಲಸಗಳನ್ನು ಕ್ರಮಬದ್ಧವಾಗಿ ನಿರ್ವಹಿಸಲು ಸದರಿ ಹಂಗಾಮಿ ಹುದ್ದೆಗಳನ್ನು ಮುಂದುವರೆಸುವುದು ಅತ್ಯವಶ್ಯಕವಾಗಿರುತ್ತದೆ. ಈ ದಿಸೆಯಲ್ಲಿ ಎಲ್ಲಾ ಅಂಶಗಳನ್ನು ಕೂಲಂಕುಷವಾಗಿ ಪರಿಶೀಲಿಸಿದ ಸರ್ಕಾರ, ಇಲಾಖಾ ಹಿತದೃಷ್ಟಿಯಿಂದ 990 ಹಂಗಾಮಿ ಹುದ್ದೆಗಳನ್ನು ಇನ್ನೂ ಒಂದು ವರ್ಷದ ಅವಧಿಗೆ ಅಂದರೆ ದಿನಾಂಕ 01–04–2010 ರಿಂದ ದಿನಾಂಕ 31–03–2011ರವರೆಗೆ ಮುಂದುವರೆಸಲು ತೀರ್ಮಾನಿಸಿದೆ.

ಆದ್ದರಿಂದ ಈ ಆದೇಶ

**ಆದೇಶ ಸಂಖ್ಯೆ : ಪಸಂಮೀ 186 ಪಸಸೆ 2010, ಬೆಂಗಳೂರು, ದಿನಾಂಕ: 15ನೇ ಮೇ, 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ, ವಿವಿಧ ಅಭಿವೃದ್ಧಿ ಯೋಜನೆಗಳನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಹಾಗೂ ಜಾನುವಾರು ಕ್ಷೇತ್ರಗಳ ಸಮರ್ಪಕ ನಿರ್ವಹಣೆಗಾಗಿ ಇಲಾಖಾ ಹಿತದೃಷ್ಟಿಯಿಂದ ಅನುಬಂಧ–1ರಲ್ಲಿ ನಮೂದಿಸಿರುವ ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆಯ ಯೋಜನೇತರ ಲೆಕ್ಕಶೀರ್ಷಿಕೆಗಳಲ್ಲಿನ ವಿವಿಧ ವೃಂದದಲ್ಲಿನ ಒಟ್ಟು 990 ಹುದ್ದೆಗಳನ್ನು ದಿನಾಂಕ 01–04–2010 ರಿಂದ ದಿನಾಂಕ 31–03–2011ರವರೆಗೆ ಒಂದು ವರ್ಷದ ಅವಧಿಗೆ ಮುಂದುವರೆಸಲು ಮಂಜೂರಾತಿ ನೀಡಿದೆ.

ಹಂಗಾಮಿ ಹುದ್ದೆಗಳನ್ನು ಮುಂದುವರೆಸಲು ತಗುಲುವ ವೆಚ್ಚವನ್ನು 2010–11ನೇ ಸಾಲಿನಲ್ಲಿ ಅನುಬಂಧ–1ರಲ್ಲಿ ನಮೂದಿಸಿರುವ ಯೋಜನೇತರ ಲೆಕ್ಕಶೀರ್ಷಿಕೆಗಳಲ್ಲಿನ ಅನುದಾನದಿಂದಲೇ ಭರಿಸತಕ್ಕದ್ದು.

ಈ ಆದೇಶವನ್ನು ಆದೇಶ ಸಂಖ್ಯೆ : ಎಫ್‌ಡಿ 1 ಟಿಎಫ್‌ಪಿ 1996, ದಿನಾಂಕ 10–07–1996ರಲ್ಲಿ ಇಲಾಖಾ ಪ್ರಧಾನ ಕಾರ್ಯದರ್ಶಿಗಳಿಗೆ/ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ವಿತ್ತಾಧಿಕಾರದನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಎಂ. ಪಿ. ನಾಗರಾಜ)**

ಪೀಠಾಧಿಕಾರಿ–2

ಪಿ.ಆರ್. 1319 ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ

(ಪಶುಸಂಗೋಪನೆ–ಎ)

**ಇಂಧನ ಸಚಿವಾಲಯ**

**ವಿಷಯ** : ಮೆ॥ ಕರ್ನಾಟಕ ವಿದ್ಯುತ್ ನಿಗಮ ನಿಯಮಿತದ 10 ಮೆಗಾ ವ್ಯಾಟ್ (1X10) ಸಾಮರ್ಥ್ಯದ ಹೆಚ್ಚುವರಿ ಜಲ ವಿದ್ಯುತ್ ಘಟಕವನ್ನು ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ** : ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಇವರ ಪತ್ರ ಸಂಖ್ಯೆ : ಎ1/ಪಿ1ಎ/2279, ದಿನಾಂಕ : 30/31–03–2010.

**ಪ್ರಸ್ತಾವನೆ :**

ಮೇಲೆ ಓದಲಾದ ಪತ್ರದಲ್ಲಿ ಕರ್ನಾಟಕ ವಿದ್ಯುತ್ ನಿಗಮ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಪ್ರಸ್ತುತ ಕೊಪ್ಪಳ ಜಿಲ್ಲೆಯ ತುಂಗಭದ್ರ ನದಿಗೆ ಅಡ್ಡಲಾಗಿ 28.00 ಮೆಗಾ ವ್ಯಾಟ್ (2x9MW+1x10MW) ಸಾಮರ್ಥ್ಯದ ಜಲ ವಿದ್ಯುತ್ ಘಟಕದ ಜೊತೆಗೆ ಮುನಿರಾಬಾದ್ ಪವರ್ ಸ್ಟೇಷನ್‌ಗೆ ಜಲಸಂಪನ್ಮೂಲ ಇಲಾಖೆ ಬಿಡುಗಡೆ ಮಾಡಿರುವ ನೀರನ್ನು ಉಪಯೋಗಿಸಿಕೊಂಡು ಹೆಚ್ಚುವರಿಯಾಗಿ 10.00 ಮೆಗಾ ವ್ಯಾಟ್ ಸಾಮರ್ಥ್ಯದ (1x10MW) ಜಲ ವಿದ್ಯುತ್ ಘಟಕವನ್ನು ಸ್ಥಾಪಿಸಲು ಅನುಮತಿಯನ್ನು ನೀಡುವಂತೆ ಪ್ರಸ್ತಾವನೆಯನ್ನು ಕಳುಹಿಸಿರುತ್ತಾರೆ. ಈ ಯೋಜನೆಯನ್ನು ಕಾರ್ಯರೂಪಕ್ಕೆ ತರಲು ತುಂಗಭದ್ರಾ ಪ್ರಾಧಿಕಾರವು ಸಹಮತಿಯನ್ನು ನೀಡಿರುತ್ತದೆ.

ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸಿಲಾಗಿದೆ :–

**ಸರ್ಕಾರಿ ಆದೇಶ ಸಂಖ್ಯೆ : ಇಎನ್ 134 ಎನ್‌ಸಿಇ 2010, ಬೆಂಗಳೂರು, ದಿನಾಂಕ: 18ನೇ ಮೇ, 2010**

ಮೆ॥ ಕರ್ನಾಟಕ ವಿದ್ಯುತ್ ನಿಗಮ ನಿಯಮಿತದ ಪ್ರಸ್ತುತ ಕೊಪ್ಪಳ ಜಿಲ್ಲೆಯ ತುಂಗಭದ್ರ ನದಿಗೆ ಅಡ್ಡಲಾಗಿ 28.00 ಮೆಗಾ ವ್ಯಾಟ್ (2x9MW+1x10MW) ಜಲ ವಿದ್ಯುತ್ ಘಟಕದೊಂದಿಗೆ ಹೆಚ್ಚುವರಿಯಾಗಿ 10 ಮೆಗಾ ವ್ಯಾಟ್ (1x10) ಸಾಮರ್ಥ್ಯದ ಜಲ ವಿದ್ಯುತ್ ಘಟಕವನ್ನು ಪ್ರಾರಂಭಿಸಲು ಸರ್ಕಾರದ ಅನುಮತಿ ನೀಡಲಾಗಿದೆ.

ಈ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಎಸ್. ಜೆ. ಸಂಪತ್ ಕುಮಾರ್)**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 1320 ಇಂಧನ ಇಲಾಖೆ

**ENERGY SECRETARIAT**

**Sub :-** Extension of time limit to implement the wind power project in favour M/s Ghevarchand Jain-reg.

**Read :-**
1. Government Order No. : DE 26 NCE 1999, dated 13-8-1999
2. Show Cause Notice No. : EN 491 NCE 2008, dated 27-12-2008
3. M/s Ghevarchand Jain letter No. : ED/KREDL/Wind/JKP/41-01-209, dated 06-01-2009
4. Proceedings of the meeting held on 19-04-2010

**Preamble:**

In the Government Order read at (1) above, approval has been accorded for the implementation of 2.00 MW Wind power project to M/s Ghevarchand Jain at Banjegondanahalli, Holalkere Taluk, Chitradurga District.

In the Show Cause Notice read at (2) above, M/s Ghevarchand Jain was asked to show cause why the project has not been implemented even after the 9 years of allotment within 7 days.

In the letter read at (3) above M/s Ghevarchand Jain has stated that the following work have taken up for implementation of the wind power project and requested to extend the time limit for further period of 6 months to implement wind power project :

1. Evacuation approval from KPTCL on 9-02-2001
2. Identification of site
3. Surveying of land and micro sitting for the WEG
4. Placement of order with NEPC. Chennai of 400 K.W. capacity machine
5. Allotment of Civil work/road work to M/s Asad Pasha and Company Engineers and Contractors, Gulbarga.
6. Electrical line survey work
7. Application for land grant to D.C., Chitradurga

The extract of the decision taken in the review meeting of Renewable Energy Projects (Wind/Small Hydro) for Restoration/Time extension held on 19-04-2010 under the Chairmanship of the Additional Chief Secretary to Government, Energy Department read at (2) above is as below :-

> "M/s Ghevarchand Jain :- The proprietor has been allotted 2 MW capacity at Banjagondanahalli (Jogimatti), Chitradurga District : DGM-Wind/RVEP made a quick appraisal about the project progress and action taken by the firm in setting up the project. Though, the project was sanctioned 11 years back but company has only obtained evacuation approval in 2001 which is not valid today. Further, the firm has not submitted the progress subsequently made in taking up the project to KREDL. The proprietor of the firm expressed that he has incurred expenditure of about Rs. 1/- crore and he is serious in developing the project. He also made to commitment that the project will be developed within 15 months.
>
> The members in the meeting expressed that the proprietor is not serious and enormous time delay has taken place. Though it is a fit case for cancellation, however, considering the amount spent by him and that too being a small player, the committee decided to extend the time period for another 12 months from the issue of Government Order with a penalty of Rs. 1.00/-lakhs per MW payable to Managing Director, KREDL, Project remaining un-commissioned by the end of 12 months, the amount will be transferred to Akshaya Shakthi Nidhi of KREDL and the project will be cancelled".

The proposal has been examined in detail and issued following Order :-

**Government Order No. EN 491 NCE 2008, Bangalore, dated : 18-05-2010**

Government accords approval for the extension of time limit for 12 months from the date of the issue of this Order to M/s Ghevarchand Jain for the implementation of 2.00 MW wind power project at Banjegondanahalli, Holalkere Taluk, Chitradurga District subject to the condition that the company shall pay a penalty of Rs. 1.00 lakh (Rupees one lakh only) per MW to the M.D. KREDL.

If the project remains un-commissioned by the end of 12 months from the date of issue of this Order, the said amount shall be transferred to Akshaya Shakti Nidhi of KREDL Land the project will be cancelled.

By Order and in the name of the Governor of Karnataka

(**S. J. Sampath Kumar)**
Under Secretary to Government
Energy Department

P.R. 1321

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ದಿನೇಶ್, ಪೊಲೀಸ್ ಉಪಾಧೀಕ್ಷಕರು, ಮಂಡ್ಯ ಉಪ ವಿಭಾಗ, ಮಂಡ್ಯ ರವರ ಮೇಲಿನ ಟ್ರಾಪ್ ಪ್ರಕರಣದಲ್ಲಿ ಅಮಾನತ್ತುಗೊಳಿಸುವ ಬಗ್ಗೆ.

**ಓದಲಾಗಿದೆ :** 1) ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರ ಕಛೇರಿ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ರವರ ಪತ್ರ ಸಂಖ್ಯೆ : ಲೋಕ್/ಐಎನ್‌ವಿ(ಜಿ)/ಎಂ-19/ಸಿಆರ್-05/2010 ಮಂಡ್ಯ ದಿನಾಂಕ 28-04-2010.

2) ಡಿಜಿ ಮತ್ತು ಐಜಿಪಿ ರವರ ಪತ್ರ ಸಂಖ್ಯೆ:ಸಿಬಿ(5)08/2010-11. ದಿನಾಂಕ 23-04-2010.

**ಪ್ರಸ್ತಾವನೆ :**

ಮೇಲೆ (1) ರಲ್ಲಿ ಓದಲಾದ ಪತ್ರದಲ್ಲಿ, ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ ರವರು ಪ್ರಸ್ತಾವನೆ ಸಲ್ಲಿಸಿ, ದಿನಾಂಕ 20-04-2010 ರಂದು ಸಂಜೆ 4-00 ಘಂಟೆಗೆ ಫಿರ್ಯಾದಿ ಶ್ರೀ ಎಂ.ಎಸ್. ಲೋಹಿತ್, ನಂ. 1798, 100 ಅಡಿ ರಸ್ತೆ, ಮಂಡ್ಯ ರವರು ಮಂಡ್ಯ ಪಶ್ಚಿಮ ಪೊಲೀಸ್ ಠಾಣೆಗೆ ಹಾಜರಾಗಿ ನೀಡಿದ ದೂರಿನ ಅನ್ವಯ ಮೊಕದ್ದಮೆ ಸಂಖ್ಯೆ: 74/2010 ಕಲಂ 3 ಕ್ಲಾಸ್ 1(10) ಎಸ್.ಸಿ / ಎಸ್.ಟಿ. ಆಕ್ಟ್ ಕೂಡ 506 ಐಪಿಸಿ ರೀತ್ಯ ಕೇಸು ದಾಖಲು ಮಾಡಿದ್ದು, ಡಿವೈ.ಎಸ್.ಪಿ. ಮಂಡ್ಯ ಉಪ ವಿಭಾಗದ ಶ್ರೀ ದಿನೇಶ್ ರವರು ಈ ಕೇಸ್‌ನಲ್ಲಿ ಚಾರ್ಜ್‌ಶೀಟ್ ಹಾಕಲು ಫಿರ್ಯಾದಿಯವರಿಂದ ರೂ. 25,000/- ಗಳನ್ನು ಕೇಳಿದ್ದು, ಲಂಚವನ್ನು ಕೊಡದಿದ್ದರೆ ಕೇಸಿನಲ್ಲಿ 'ಬಿ' ರಿಪೋರ್ಟ್ ಹಾಕಿ ಮುಗಿಸುತ್ತೇನೆಂದು ಲಂಚದ ಹಣಕ್ಕೆ ಫಿರ್ಯಾದಿಯವರನ್ನು ಒತ್ತಾಯಿಸಿರುವುದಾಗಿ ವರದಿ ಮಾಡಿರುತ್ತಾರೆ. ಫಿರ್ಯಾದುದಾರರು ಲಂಚದ ಹಣ ಕೊಡಲು ಇಷ್ಟವಿಲ್ಲದ ಕಾರಣ ಆರೋಪಿತರ ವಿರುದ್ಧ ದೂರನ್ನು ಸಲ್ಲಿಸಿದ್ದು, ತನಿಖಾಧಿಕಾರಿಯವರು ಮಂಡ್ಯ ಲೋಕಾಯುಕ್ತ ಠಾಣೆಗೆ ಮೊಕದ್ದಮೆ ಸಂಖ್ಯೆ:5/2010 ಕಲಂ 7, 13(1)(ಡಿ) ಸಹಿತ 13(2) ಪಿ.ಸಿ.ಆಕ್ಟ್, 1988ರ ರೀತ್ಯ ಪ್ರಕರಣವನ್ನು ದಾಖಲಿಸಿ ಅದೇ ದಿನ 20-04-2010 ರಂದು ಲೋಕಾಯುಕ್ತ ಬೀಸಿದ ಬಲೆಯಲ್ಲಿ ಸಿಕ್ಕಿಬಿದ್ದಿದ್ದು, ಆರೋಪಿತರಾದ ಶ್ರೀ ದಿನೇಶ್, ಡಿವೈ.ಎಸ್.ಪಿ. ಮಂಡ್ಯ ಉಪ ವಿಭಾಗ, ಮಂಡ್ಯ ರವರು ಲಂಚದ ಹಣ ರೂ. 25,000/- ಗಳನ್ನು ಒತ್ತಾಯ ಮಾಡಿ ಫಿರ್ಯಾದುದಾರರಿಂದ ಪಡೆದುಕೊಂಡಿರುತ್ತಾರೆ. ಈ ಲಂಚದ ಹಣವನ್ನು ವಶಪಡಿಸಿಕೊಂಡು ಲೋಕಾಯುಕ್ತ ತನಿಖಾಧಿಕಾರಿಯವರು ಶ್ರೀ ದಿನೇಶ್, ಉಪಾಧೀಕ್ಷಕರನ್ನು ದಸ್ತಗಿರಿ ಮಾಡಿರುವುದಾಗಿ ವರದಿ ಮಾಡಿರುತ್ತಾರೆ. ಇವರ ವಿರುದ್ಧ ಭ್ರಷ್ಟಾಚಾರ ಆಪಾದನೆ ಮೇಲ್ನೋಟಕ್ಕೆ ಸಾಬೀತಾಗಿರುವುದರಿಂದ ಪ್ರಕರಣದ ಸುಗಮ ತನಿಖೆಗೆ ಅಡ್ಡಿ ಉಂಟು ಮಾಡುವ ಅಥವಾ ತನಿಖೆಯಲ್ಲಿ ಹಸ್ತಕ್ಷೇಪ ಮಾಡುವ ಹಾಗೂ ಸಾಕ್ಷಿ ಪುರಾವೆಗಳನ್ನು ನಾಶಪಡಿಸುವ ಸಾಧ್ಯತೆಗಳಿರುವುದರಿಂದ ಅವರನ್ನು ಕೂಡಲೇ ಅಮಾನತ್ತಿನಲ್ಲಿರಿಸಿ ಅವರ ಲೀನ್ ಅನ್ನು ಬೇರೆಡೆಗೆ ವರ್ಗಾಯಿಸಲು ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ ರವರು ಕೋರಿರುತ್ತಾರೆ. ತಮ್ಮ ವರದಿಯೊಡನೆ ಪೊಲೀಸ್ ಇನ್ಸ್‌ಪೆಕ್ಟರ್, ಕರ್ನಾಟಕ ಲೋಕಾಯುಕ್ತ, ಮಂಡ್ಯ ಇವರ ವರದಿಯ ಪ್ರತಿ, ಎಫ್.ಐ.ಆರ್. ಪ್ರತಿ, ದೂರಿನ ಪ್ರತಿ ಹಾಗೂ ಮಹಜರು ಮತ್ತು ಟ್ರಾಪ್ ಮಹಜರಿನ ಪ್ರತಿಗಳನ್ನು ಹಾಗೂ ಆರೋಪಿತ ಅಧಿಕಾರಿಯವರು ತಾವು ನಿರ್ದೋಷಿ ಎಂದು ಸಲ್ಲಿಸಿರುವ ಮನವಿಯ ಪ್ರತಿಯನ್ನು ಸಹ ಲಗತ್ತಿಸಿರುತ್ತಾರೆ.

ಮೇಲೆ (2) ರಲ್ಲಿ ಓದಲಾದ ಪತ್ರದಲ್ಲಿ ಶ್ರೀ ದಿನೇಶ್, ಡಿವೈ.ಎಸ್.ಪಿ. ಮಂಡ್ಯ ಉಪ ವಿಭಾಗ ರವರು ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ ರವರ ವರದಿಯನ್ವಯ ದಿನಾಂಕ 20-04-2010 ರಂದು ಲೋಕಾಯುಕ್ತ ರವರು ಬೀಸಿದ ಬಲೆಯಲ್ಲಿ ಟ್ರಾಪ್ ಆಗಿರುವುದಾಗಿ ವರದಿಯಾಗಿದ್ದು, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು, 1965ರ ನಿಯಮ 5(2) ರನ್ವಯ ದಿನಾಂಕ 20-04-2010 ರಿಂದ ಪೂರ್ವಾನ್ವಯವಾಗುವಂತೆ ಸೇವೆಯಿಂದ ಅಮಾನತ್ತುಗೊಳಿಸಲು ಡಿಜಿ ಮತ್ತು ಐಜಿಪಿ ರವರು ಶಿಫಾರಸ್ಸು ಮಾಡಿರುತ್ತಾರೆ. ಪ್ರಸ್ತಾವನೆಯನ್ನು ಪರಿಶೀಲಿಸಿ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ :. ಒಇ 197 ಪೊಸಿಪ 2010, ಬೆಂಗಳೂರು, ದಿನಾಂಕ: 28ನೇ ಮೇ 2010**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು, 1965ರ ನಿಯಮ 5(1) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ದಿನೇಶ್, ಪೊಲೀಸ್ ಉಪಾಧೀಕ್ಷಕರು, ಮಂಡ್ಯ ಉಪ ವಿಭಾಗ, ಮಂಡ್ಯ ರವರ ವಿರುದ್ಧ ಶಿಸ್ತು ಕ್ರಮ ಕಾಯ್ದಿಟ್ಟು, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು, 1965ರ ನಿಯಮ 5(2) ರನ್ವಯ ಇವರನ್ನು ದಸ್ತಗಿರಿ ಮಾಡಿದ ದಿನಾಂಕ 20-04-2010 ರಿಂದಲೇ ಜಾರಿಗೆ ಬರುವಂತೆ ಸೇವೆಯಿಂದ ಅಮಾನತ್ತಿನಲ್ಲಿಡಲಾಗಿದೆ. ಇವರ ಲೀನ್ ಅನ್ನು ಡಿವೈ.ಎಸ್.ಪಿ. ಡಿ.ಸಿ.ಆರ.ಬಿ. ಬೆಂಗಳೂರು ಜಿಲ್ಲೆ ಇಲ್ಲಿನ ಹುದ್ದೆಗೆ ಸ್ಥಳಾಂತರಿಸಲಾಗಿದೆ.

ಅಮಾನತ್ತಿನ ಅವಧಿಯಲ್ಲಿ ಶ್ರೀ ದಿನೇಶ್, ಪೊಲೀಸ್ ಉಪಾಧೀಕ್ಷಕರು ರವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 98ರ ಅನ್ವಯ ಜೀವನಾಧಾರ ಭತ್ಯೆಯನ್ನು ನೀಡತಕ್ಕದ್ದು.

ಅಮಾನತ್ತಿನ ಅವಧಿಯಲ್ಲಿ ಶ್ರೀ ದಿನೇಶ್, ಪೊಲೀಸ್ ಉಪಾಧೀಕ್ಷಕರು ರವರು ಸಕ್ಷಮ ಪ್ರಾಧಿಕಾರದ ಅನುಮೋದನೆ ಪಡೆಯದೆ ಕೇಂದ್ರಸ್ಥಾನವನ್ನು ಬಿಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1357

**(ಟಿ.ಎನ್.ರವಿಪ್ರಕಾಶ್)**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ. (ಪೊಲೀಸ್ ಸೇವೆಗಳು)

**ಕಂದಾಯ ಸಚಿವಾಲಯ**

**ವಿಷಯ :** ಬೆಂಗಳೂರು ನಗರ ಶೇಷಾದ್ರಿಪುರಂ, ಹನುಮಂತಪುರ ಸ.ನಂ. 55/2 (ಪಿಟಿಎಸ್ ನಂ. 143 ಚಾಲ್ತಾ ನಂ 133 ಮತ್ತು 114) ರಲ್ಲಿನ 1 ಎಕರೆ ಸರ್ಕಾರಿ ಜಮೀನನ್ನು ಕರ್ನಾಟಕ ಕೊಳಚೆ ನಿರ್ಮೂಲನಾ ಮಂಡಳಿಗೆ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ :**
1) ವಿಶೇಷ ಜಿಲ್ಲಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ ಇವರ ಪತ್ರ ಸಂಖ್ಯೆ: ಎಲ್ಎನ್‌ಡಿ (ಎನ್) ಸಿಆರ್/533/90–91, ದಿ: 24–10–2007.
2) ಆಯುಕ್ತರು, ಕರ್ನಾಟಕ ಕೊಳಚೆ ನಿರ್ಮೂಲನಾ ಮಂಡಳಿ, ಬೆಂಗಳೂರು ಇವರ ಪತ್ರ ಸಂಖ್ಯೆ ಕಕೊನಿಮ/ಕಾಶಾ/2/1997–98/341 ದಿನಾಂಕ 30–07–2009
3) ಸರ್ಕಾರದ ಕಾರ್ಯದರ್ಶಿ, ಕಂದಾಯ ಮತ್ತು ಪದನಿಮಿತ್ತ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಸಾರ್ವಜನಿಕ ಜಮೀನುಗಳ ನಿಗಮ ಇವರ ಅರೆ ಸರ್ಕಾರಿ ಪತ್ತ ಸಂಖ್ಯೆ: ಕೆಪಿಎಲ್‌ಸಿ/ ಎಲ್ಎನ್‌ಡಿ/ 173/2009–10 ದಿ: 05.03.2010.

**ಪ್ರಸ್ತಾವನೆ :**

ವಿಶೇಷ ಜಿಲ್ಲಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ ಇವರು ಮೇಲೆ ಓದಲಾದ ಕ್ರಮ ಸಂಖ್ಯೆ (1)ರಲ್ಲಿನ ಪತ್ರದಲ್ಲಿ, ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿ, ಬೆಂಗಳೂರು ನಗರ ಶೇಷಾದ್ರಿಪುರಂ, ಹನುಮಂತಪುರ ಸ.ನಂ. 55/2 (ಪಿಟಿಎಸ್ ನಂ 143, ಚಾಲ್ತಾ ನಂ 133 ಮತ್ತು 114) ರಲ್ಲಿನ 1 ಎಕರೆ ಸರ್ಕಾರಿ ಜಮೀನನ್ನು ಕರ್ನಾಟಕ ಕೊಳಚೆ ನಿರ್ಮೂಲನಾ ಮಂಡಳಿಗೆ ಕಛೇರಿ ಸಂಕೀರ್ಣ ನಿರ್ಮಾಣಕ್ಕಾಗಿ ಮಂಜೂರು ಮಾಡಲು ಸರ್ಕಾರದ ಆದೇಶ ಕೋರಿರುತ್ತಾರೆ.

ಆಯುಕ್ತರು, ಕರ್ನಾಟಕ ಕೊಳಚೆ ನಿರ್ಮೂಲನಾ ಮಂಡಳಿ ಇವರು ಮೇಲೆ ಓದಲಾದ ಕ್ರಮ ಸಂಖ್ಯೆ (2)ರಲ್ಲಿನ ಪತ್ರದ ದಿ: 30.07.2009ರಲ್ಲಿ ಬೆಂಗಳೂರು ಉತ್ತರ ತಾಲ್ಲೂಕು ಶೇಷಾದ್ರಿಪುರಂ, ಹನುಮಂತಪುರ ಸ.ನಂ. 55/2 (ಪಿಟಿಎಸ್ ನಂ. 143, ಚಾಲ್ತಾ ನಂ. 133 ಮತ್ತು 114) ರಲ್ಲಿನ 1 ಎಕರೆ ಸರ್ಕಾರಿ ಜಮೀನನ್ನು ಮಂಡಳಿಯು ಈಗಾಗಲೇ ಸ್ವಾಧೀನದಲ್ಲಿದ್ದು, ಮಂಡಳಿಯ ಕಛೇರಿ ಸಂಕೀರ್ಣ ನಿರ್ಮಾಣಕ್ಕೆ ಈ ಜಮೀನನ್ನು ಮಂಜೂರು ಮಾಡುವಂತೆ ಕೋರಿರುತ್ತಾರೆ.

ಜಿಲ್ಲಾಧಿಕಾರಿಗಳ ವರದಿಯನ್ವಯ ಸದರಿ ಜಮೀನಿನ ಕುರಿತು ಶ್ರೀ ಜಿ. ವಿರೂಪಾಕ್ಷ ಸ್ವಾಮಿ ಎನ್ನುವವರು ನಗರ ಸಿವಿಲ್ ನ್ಯಾಯಾಲಯದಲ್ಲಿ ಸಲ್ಲಿಸಿದ್ದ ಮೂಲ ದಾವೆ ಸಂಖ್ಯೆ:7797/92ನ್ನು ನ್ಯಾಯಾಲಯವು ದಿ: 25.08.2005ರ ಆದೇಶದಲ್ಲಿ ವಜಾಗೊಳಿಸಿರುವುದರಿಂದ ಸದರಿ ಜಮೀನನ್ನು ಕೊಳಚೆ ನಿರ್ಮೂಲನಾ ಮಂಡಳಿಗೆ ಮಂಜೂರು ಮಾಡಲು ಪ್ರಸ್ತಾವಿಸಿರುತ್ತಾರೆ. ಪ್ರಶ್ನಿತ ಜಮೀನು ನಗರ ವ್ಯಾಪ್ತಿಯಲ್ಲಿದ್ದು, ಜಿಲ್ಲಾಧಿಕಾರಿಗಳ ವರದಿಯನ್ವಯ ಮಾರ್ಗಸೂಚಿ ದರದ ಪಟ್ಟಿಯಂತೆ ಪ್ರಸಕ್ತ ಮಾರುಕಟ್ಟೆ ದರ ಪ್ರತಿ ಚದರ ಅಡಿಗೆ ರೂ. 1000/– ಆಗಿರುತ್ತದೆ.

ಸರ್ಕಾರದ ಕಾರ್ಯದರ್ಶಿ, ಕಂದಾಯ ಮತ್ತು ಪದನಿಮಿತ್ತ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಸಾರ್ವಜನಿಕ ಜಮೀನುಗಳ ನಿಗಮ ಇವರು ಮೇಲೆ ಓದಲಾದ ಕ್ರಮ ಸಂಖ್ಯೆ (3)ರಲ್ಲಿನ ದಿ: 05.03.2010ರ ಅರೆ ಸರ್ಕಾರಿ ಪತ್ರದಲ್ಲಿ ಕೊಳಚೆ ನಿರ್ಮೂಲನಾ ಮಂಡಳಿಯು ಸರ್ಕಾರದ ಸ್ವಾಯತ್ತ ಸಂಸ್ಥೆಯಾಗಿದ್ದು, ಸರ್ಕಾರದ ಈ ಜಮೀನನ್ನು ಸಂರಕ್ಷಿಸಲು ಕರ್ನಾಟಕ ಕೊಳಚೆ ನಿರ್ಮೂಲನಾ ಮಂಡಳಿ ಇವರು ಪ್ರಮುಖ ಪಾತ್ರ ವಹಿಸಿರುವುದರಿಂದ ಸದರಿ ಸಂಸ್ಥೆಗೆ ಶೇಕಡ 50ರಷ್ಟು ಮಾರ್ಗಸೂಚಿ ದರ ವಿಧಿಸಿ ಈ ಜಮೀನನ್ನು ಮಂಜೂರು ಮಾಡಲು ಶಿಫಾರಸ್ಸು ಮಾಡಿರುತ್ತಾರೆ.

ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿದೆ. ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ :. ಆರ್‌ಡಿ 1332 ಎಲ್‌ಜಬಿ 2007, ಬೆಂಗಳೂರು, ದಿನಾಂಕ: 27ನೇ ಮೇ 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ಭೂ ಮಂಜೂರಾತಿ ನಿಯಮಗಳು 1969ರ ನಿಯಮ 27ರಲ್ಲಿನ ಅಧಿಕಾರವನ್ನು ಚಲಾಯಿಸಿ ನಿಯಮ 20(1)(ಸಿ)ನ್ನು ಸಡಿಲಿಸಿ ಬೆಂಗಳೂರು ನಗರ, ಶೇಷಾದ್ರಿಪುರಂ, ಹನುಮಂತಪುರ ಸ.ನಂ. 55/2 (ಪಿಟಿಎಸ್ ನಂ. 143, ಚಾಲ್ತಾ ನಂ. 133 ಮತ್ತು 114) ರಲ್ಲಿನ 1 ಎಕರೆ ಸರ್ಕಾರಿ ಜಮೀನನ್ನು ಕರ್ನಾಟಕ ಕೊಳಚೆ ನಿರ್ಮೂಲನಾ ಮಂಡಳಿಗೆ ಕಛೇರಿ ಸಂಕೀರ್ಣ ನಿರ್ಮಾಣಕ್ಕಾಗಿ ಮಾರ್ಗಸೂಚಿ ದರದಲ್ಲಿ ಶೇ 50ರಷ್ಟು ದರ ವಿಧಿಸಿ ಮಂಜೂರು ಮಾಡಲು ಸರ್ಕಾರವು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1358

**(ಇ. ಈಶ್ವರ ನಾಯಕ್)**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಭೂ.ಮಂ).

## ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವಾಲಯ

**ವಿಷಯ :** ಶ್ರೀಮತಿ ಡಿ. ನಿರ್ಮಲ, ಉಪ ನಿರ್ದೇಶಕರು (ನಿ), ಆಹಾರ ಮತ್ತು ನಾಗರಿಕ ಸರಬರಾಜು ಇಲಾಖೆ, ಉತ್ತರ ಕನ್ನಡ ಜಿಲ್ಲೆ ಹಾಗೂ ಶ್ರೀ ಎಸ್.ಎಸ್. ಕೂಳಂಬಕರ್, ಲೆಕ್ಕಾಧಿಕ್ಷಕರು (ನಿವೃತ್ತ) ಆಹಾರ ಮತ್ತು ನಾಗರಿಕ ಸರಬರಾಜು ಇಲಾಖೆ, ಉತ್ತರ ಕನ್ನಡ ಜಿಲ್ಲೆ ಇವರುಗಳ ವಿರುದ್ಧ ಇಲಾಖಾ ವಿಚಾರಣೆ ನಡೆಸುವ ಬಗ್ಗೆ – ಮಂಡನಾಧಿಕಾರಿಯನ್ನು ಬದಲಾಯಿಸುವ ಕುರಿತು.

**ಓದಲಾಗಿದೆ :** 1) ಸರ್ಕಾರದ ಆದೇಶ ಸಂಖ್ಯೆ: ಅನಾಸ 91 ಅಇಸೇ 2004, ದಿ: 27–7–2006.

2) ಸರ್ಕಾರದ ಆದೇಶ ಸಂಖ್ಯೆ: ಅನಾಸ 91 ಆಇಸೇ 2004, ಬೆಂಗಳೂರು, ದಿನಾಂಕ 3.12.2007.

3) ಸರ್ಕಾರದ ಆದೇಶ ಸಂಖ್ಯೆ: ಅನಾಸ 91 ಆಇಸೇ 2004, ಬೆಂಗಳೂರು, ದಿನಾಂಕ 19.12.2009.

4) ಸಂಖ್ಯೆ:ಸಿಎಫ್‌ಎಸ್/ಇಎಸ್‌ಟಿ(2)34/2003–04 ದಿನಾಂಕ 14.5.2010.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಶ್ರೀಮತಿ ಡಿ. ನಿರ್ಮಲ ಉಪ ನಿರ್ದೇಶಕರು (ನಿವೃತ್ತ) ಮತ್ತು ಶ್ರೀ ಎಸ್.ಎಸ್.ಕೊಳಂಬಕರ್, ಲೆಕ್ಕಾಧೀಕ್ಷಕರು, (ನಿವೃತ್ತ) ಇವರುಗಳ ಬಗ್ಗೆ ಇಲಾಖಾ ವಿಚಾರಣೆ ನಡೆಸಲು ಶ್ರೀ ಕೆ. ಈಶ್ವರಭಟ್, ನಿವೃತ್ತ ಜಿಲ್ಲಾ ಮತ್ತು ಸೆಷನ್ ನ್ಯಾಯಾಧೀಶರನ್ನು ವಿಚಾರಣಾಧಿಕಾರಿಯನ್ನಾಗಿಯೂ ಹಾಗೂ ಉಪ ನಿರ್ದೇಶಕರು, ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ, ದಕ್ಷಿಣ ವಲಯ, ಬೆಂಗಳೂರು ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಲಾಗಿತ್ತು.

ಮೇಲೆ (2)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಉಪ ನಿರ್ದೇಶಕರು, ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ, ದಕ್ಷಿಣ ವಲಯ, ಬೆಂಗಳೂರು ಇಲ್ಲಿ ಕಾರ್ಯ ನಿರ್ವಹಿಸುತ್ತಿದ್ದ ಅಧಿಕಾರಿಯು ಬೇರೆ ಇಲಾಖೆಗೆ ವರ್ಗಾವಣೆಗೊಂಡಿರುವುದರಿಂದ ಬದಲಿ ಮಂಡನಾಧಿಕಾರಿಯನ್ನು ನೇಮಿಸಲು ತೀರ್ಮಾನಿಸಿ ಉಪ ನಿರ್ದೇಶಕರು (ಸಂ.ವಿ), ಆಯುಕ್ತರ ಕಛೇರಿ, ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ, ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಲಾಗಿತ್ತು.

ಮೇಲೆ (3)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಕೇಂದ್ರ ಕಛೇರಿಯಲ್ಲಿ ಕೆಲಸ ಒತ್ತಡ ಹೆಚ್ಚಾಗಿರುವುದರಿಂದ ಕೇಂದ್ರ ಕಛೇರಿಯ ಉಪ ನಿರ್ದೇಶಕರು (ಸಂ.ವಿ) ರವರ ಬದಲಾಗಿ ಶ್ರೀ ಮರ್ತೂರ್‌ಕರ್ ತಿಪ್ಪಣ್ಣ, ಉಪ ನಿರ್ದೇಶಕರು, ಅನಾಸ ಮತ್ತು ಗ್ರಾವ್ಯ ಇಲಾಖೆ, ದಕ್ಷಿಣ ವಲಯ, ಬೆಂಗಳೂರು ರವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಲಾಗಿರುವುದು ಸರಿಯಷ್ಟೆ.

ಮೇಲೆ (4)ರಲ್ಲಿ ಓದಲಾದ ಆಯುಕ್ತರ ಪತ್ರದಲ್ಲಿ ದಕ್ಷಿಣ ವಲಯ, ಬೆಂಗಳೂರು ಇಲ್ಲಿ ಕಾರ್ಯನಿರ್ವಹಿಸುತ್ತಿದ್ದ ಶ್ರೀ ಮರ್ತೂರ್‌ಕರ್ ತಿಪ್ಪಣ್ಣ, ಉಪ ನಿರ್ದೇಶಕರು, ಆನಾಸ ಮತ್ತು ಗ್ರಾವ್ಯ ಇಲಾಖೆ ಇವರು ಬೀದರ್ ಜಿಲ್ಲೆಗೆ ವರ್ಗಾವಣೆಗೊಂಡಿದ್ದು ಪ್ರಕರಣಕ್ಕೆ ಸಂಬಂಧಿಸಿದಂತೆ ವಿಚಾರಣೆಗೆ ಬೀದರ್‌ನಿಂದ ಬೆಂಗಳೂರಿಗೆ ಬಂದು ಹೋಗುವುದು ಕಷ್ಟಸಾಧ್ಯವಾಗುತ್ತದೆಯಾದ್ದರಿಂದ ಶ್ರೀ ಹೆಚ್.ಆರ್. ವಿಜಯಕುಮಾರ್, ಉಪ ನಿರ್ದೇಶಕರು, ಆನಾಸ ಮತ್ತು ಗ್ರಾವ್ಯ ಇಲಾಖೆ, ಪಶ್ಚಿಮ ವಲಯ, ಬೆಂಗಳೂರು ರವರನ್ನು ಮಂಡನಾಧಿಕಾರಿಗಳನ್ನಾಗಿ ನೇಮಿಸುವಂತೆ ಕೋರಿರುತ್ತಾರೆ, ಆಯುಕ್ತರ ಪ್ರಸ್ತಾವನೆಯನ್ನು ಪರಿಶೀಲಿಸಿದ ನಂತರ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ :. ಆನಾಸ 91 ಆಇಸೇ 2004, ಬೆಂಗಳೂರು, ದಿನಾಂಕ: 25ನೇ ಮೇ 2010**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಕಾರಣಗಳ ಹಿನ್ನೆಲೆಯಲ್ಲಿ ಈ ಪ್ರಕರಣದಲ್ಲಿ ಉಪ ನಿರ್ದೇಶಕರು (ಸಂ.ವಿ.) ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ ಕೇಂದ್ರ ಕಛೇರಿ, ಬೆಂಗಳೂರು ಇವರನ್ನು ಮಂಡನಾಧಿಕಾರಿಯಾಗಿ ನೇಮಿಸಿರುವ ಮೇಲೆ (3)ರಲ್ಲಿ ಓದಲಾದ ಆದೇಶವನ್ನು ಮಾರ್ಪಡಿಸಿ ಕರ್ನಾಟಕ ನಾಗರಿಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮ 1957ರ ನಿಯಮ 11(5) (ಸಿ)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ವಿಚಾರಣಾಧಿಕಾರಿಗಳಿಗೆ ವಿಷಯವನ್ನು ಮಂಡಿಸಲು ಶ್ರೀ ಹೆಚ್.ಆರ್. ವಿಜಯಕುಮಾರ್, ಉಪ ನಿರ್ದೇಶಕರು, ಅನಾಸ ಮತ್ತು ಗ್ರಾವ್ಯ ಇಲಾಖೆ, ಪಶ್ಚಿಮ ವಲಯ, ಬೆಂಗಳೂರು, ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಕ ಮಾಡಿದೆ. ವಿಚಾರಣಾಧಿಕಾರಿಗಳು ವಿಚಾರಣೆಯನ್ನು 3 ತಿಂಗಳೊಳಗಾಗಿ ಮುಗಿಸಿ ಸೂಕ್ತ ದಾಖಲೆಗಳೊಂದಿಗೆ ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಕಳುಹಿಸುವಂತೆ ನಿರ್ದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1359

**(ಪಿ. ಸೋಮಣ್ಣ)**

ಪೀಠಾಧಿಕಾರಿ, ಆಹಾರ–1 ಶಾಖೆ,

ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ.

**ಒಳಾಡಳಿತ ಸಚಿವಾಲಯ**

**ವಿಷಯ :** ಶ್ರೀ ಎಸ್.ಎಸ್. ಮಧು, ಪಿ.ಸಿ. (ನಿಸ್ತಂತು) ಪೊಲೀಸ್ ನಿಯಂತ್ರಣ ಕೇಂದ್ರ, ಶಿವಮೊಗ್ಗ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ :**
1) ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಶಿವಮೊಗ್ಗ ಜಿಲ್ಲೆ, ಇವರ ಆದೇಶ ಸಂಖ್ಯೆ: ಸಿಬ್ಬಂದಿ (4) ಶಿಕ್ಷೆ/188/08 ಓ.ಬಿ: 496/08 ದಿ: 17–12–2008.
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಪೂರ್ವ ವಲಯ, ದಾವಣಗೆರೆ, ಇವರ ಆದೇಶ ಸಂಖ್ಯೆ: 45/ಅಪೀಲು/ಸಿಬ್ಬಂದಿ–2/2008–09 ಓ.ಬಿ: 302/2008–09 ದಿ: 18–3–09.
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿ: 01–8–09
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)35/2009–10 ದಿನಾಂಕ 11–3–2010.

**ಪ್ರಸ್ತಾವನೆ :**

ಶ್ರೀ ಎಸ್.ಎಸ್. ಮಧು ಪಿ.ಸಿ. (ನಿಸ್ತಂತು) ಪೊಲೀಸ್ ನಿಯಂತ್ರಣ ಕೇಂದ್ರ, ಶಿವಮೊಗ್ಗ ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 7ರಡಿ ಈ ಕೆಳಕಂಡ ದೋಷಾರೋಪಣೆಯನ್ನು ಹೊರಿಸಲಾಗಿತ್ತು.

**ದೋಷಾರೋಪಣೆ:**

> "ನೀವು ಪಿ.ಸಿ. (ನಿಸ್ತಂತು) ಶ್ರೀ ಎಸ್.ಎಸ್. ಮಧು, ನಿಮ್ಮ ಮೇಲಾಧಿಕಾರಿಯವರು ಕರ್ತವ್ಯದಲ್ಲಿದ್ದಾಗ ಸಮವಸ್ತ್ರದಲ್ಲಿರುವಂತೆಯೂ ಹಿರಿಯ ಅಧಿಕಾರಿ/ಸಿಬ್ಬಂದಿಗಳಿಗೆ ಗೌರವ ನೀಡುವಂತೆ ಸೂಚಿಸಿದ್ದಾಗ್ಯೂ ಸೂಚನೆಯನ್ನು ಧಿಕ್ಕರಿಸಿ ದಿನಾಂಕ: 27–10–08 ಕರ್ತವ್ಯಕ್ಕೆ ಅನಧಿಕೃತವಾಗಿ ಗೈರು ಹಾಜರಾಗಿ ಕರ್ತವ್ಯದಲ್ಲಿ ತೀವ್ರ ಅಶಿಸ್ತು ಮತ್ತು ಬೇಜವಾಬ್ದಾರಿ ಪ್ರದರ್ಶಿಸಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಸಮಜಾಯಿಷಿಯನ್ನು ಪಡೆದು, ಅದನ್ನೊಪ್ಪದ ಶಿಸ್ತುಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಶಿವಮೊಗ್ಗ, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 17–12–08ರ ಆದೇಶದಲ್ಲಿ ಅರ್ಜಿದಾರರಿಗೆ "ಛೀಮಾರಿ" ಹಾಕಿದ್ದಾರೆ ಹಾಗೂ ಗೈರು ಹಾಜರಾದ ಅವಧಿ ದಿ: 28–10–2008 ರಿಂದ 14–11–08ರ ವರೆಗಿನ 18 ದಿನಗಳನ್ನು ವೇತನರಹಿತ ರಜೆ ಎಂದು ಪರಿಗಣಿಸಿದ್ದಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಪೂರ್ವ ವಲಯ, ದಾವಣಗೆರೆ, ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 18–03–09ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ :. ಒಇ 151 ಪೊಸಿಅ 2009 ಬೆಂಗಳೂರು, ದಿನಾಂಕ: 27ನೇ ಮೇ 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎಸ್.ಎಸ್. ಮಧು ಪಿ.ಸಿ. (ನಿಸ್ತಂತು) ಪೊಲೀಸ್ ನಿಯಂತ್ರಣ ಕೇಂದ್ರ, ಶಿವಮೊಗ್ಗ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1360

**(ಟಿ.ಎನ್. ರವಿಪ್ರಕಾಶ್)**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**INFRASTRUCTURE DEVELOPMENT SECRETARIAT**

**Sub :** Fee for advisory services by iDeCK for evaluation of project cost of Bangalore International Airport Project.

**Ref :** 1) G.O.No. IDD 3 DIA 05, dated : 28-3-05.
2) G.O.No. IDD 47 NSW 04, dated : 29-3-05.
3) G.O.No. IDD 36 DIA 05, dated : 28-6-05.
4) Notification No. PWD 32 FC III/2006, dated 18-1-06 and 15-3-06.
5) G.O.No. IDD 110 DIA 05, dated : 4-11-06.
6) Corrigendum 110 DIA 05, dated 12-12-06.
7) G.O.No. IDD 135 DIA 2008, dated : 25-6-2009.
8) Letter No. iDeCK/2009-10/2249, dated 29-3-2010 of MD & CEO, iDeCK.

**Preamble :**

In G.O. dated 28-3-2005 read at Sl.No. (1) above, Government had released an amount of Rs. 4.75 lakhs for advisory services to iDeCK for evaluations of cost escalation of Bangalore International Airport Project.

2. In G.O. dated 29-3-2005 read at Sl.No. (2), above Government has released Rs. 2.00 Lakhs for project studies entrusted to iDeCK.

3. In G.O. dated 28-6-2008 read at Sl.No. (3) above, an amount of Rs. 2.75 lakhs was released being the fees for III & final Installment of fees to iDeCK for evaluation of cost escalation of BIAP.

4. In G.O. dated 4-11-06 read at Sl.No. (5) above, an amount of Rs. 4.90 lakhs released for project cost review.

5. In G.O. dated 25-6-2009 read at Sl.No. (7) above, an amount of Rs. 4.90 lakhs has been released towards fee for advisory services by iDeCK for evaluation of project cost of Bangalore International Airport project for the quarter ending March 2008.

6. In the letter dated 29-3-2010 read at Sl.No. 8 iDeCK explained the reasons for claim of Rs. 4.90 lakhs (Four Lakhs Ninety Thousand only) being the fees for advisory and other services rendered as part of the cost review report of BIAP during the period April 2008 to December 2009. The proposal has been examined and hence the following order.

**GOVERNMENT ORDER NO. : IDD 135 DIA 2008, BANGALORE, DATED : 25-5-2010**

After careful examination Government are pleased to release an amount of Rs. 4,90,000/- (Four Lakhs Ninety Thousand only) inclusive of service tax being the fee for advisory services and other services rendered by iDeCK as part of project cost evaluation report of BIAP for the period April 2008 to December 2009.

2. This cost would be met out of the funds available under the Head of Account 3451-00-090-1-06-059 Infrastructure Preliminary Studies-other expenditure for 2010-2011.

3. The Chief Financial Officer, iDeCK would draw this amount on a payee's receipt duly countersigned by the Under Secretary to Government, Infrastructure Development Department.

4. This order is issued in accordance with delegated financial powers to the Secretaries of the department vide G.O. No. FD 1 TFP 2008 dated 16-5-2008.

By Order and in the name of the Governor of Karnataka

**(N. Manjula Geetha)**
Under Secretary to Government
Infrastructure Development Department.

P.R. 1372

**ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ**

**ವಿಷಯ :** ಆಡಳಿತ ತರಬೇತಿ ಸಂಸ್ಥೆ, ಮೈಸೂರಿನಲ್ಲಿ ದಿನಾಂಕ : 7–6–2010 ರಿಂದ 4–8–2010 ರವರೆಗೆ ನಡೆಯಲಿರುವ Programme on Capacity Building for Revenue officers ತರಬೇತಿ ಕೋರ್ಸಿಗೆ ಕೆ.ಎ.ಎಸ್. ಅಧಿಕಾರಿಗಳನ್ನು ನಿಯೋಜಿಸುವ ಬಗ್ಗೆ.

**ಓದಲಾಗಿದೆ :** ಆಡಳಿತ ತರಬೇತಿ ಸಂಸ್ಥೆ, ಮೈಸೂರುರವರ ಅರೆ ಸರ್ಕಾರಿ ಪತ್ರ ಸಂಖ್ಯೆ : ಆತಸಂ/ತರಬೇತಿ/16/2009–10, ದಿನಾಂಕ : 5–5–2010

**ಪ್ರಸ್ತಾವನೆ :**

ಮೇಲೆ ಓದಲಾದ ದಿನಾಂಕ : 5–5–2010ರ ಅರೆ ಸರ್ಕಾರಿ ಪತ್ರದಲ್ಲಿ ಆಡಳಿತ ತರಬೇತಿ ಸಂಸ್ಥೆ, ಮೈಸೂರು, ಇಲ್ಲಿ ದಿನಾಂಕ : 7–6–2010 ರಿಂದ 9–6–2010, 1–7–2010 ರಿಂದ 3–7–2010 ಮತ್ತು 2–8–2010 ರಿಂದ 4–8–2010 ರವರೆಗೆ ಭಾರತ ಸರ್ಕಾರದ ಸಿಬ್ಬಂದಿ ಮತ್ತು ತರಬೇತಿ ಇಲಾಖೆಯು DFID, Training for all ಯೋಜನೆ ಅಡಿಯಲ್ಲಿ

Programme on Capacity Building for Revenue Officers ತರಬೇತಿ ಕೋರ್ಸಿಗೆ ವಿಶೇಷ ಭೂಸ್ವಾಧೀನಾಧಿಕಾರಿಗಳು/ ಸಹಾಯಕ ಆಯುಕ್ತರ ವೃಂದದ ಅಧಿಕಾರಿಗಳನ್ನು ನಿಯೋಜಿಸುವಂತೆ ಮಹಾನಿರ್ದೇಶಕರು ಕೋರಿದ್ದಾರೆ. ಸದರಿ ತರಬೇತಿಗೆ ಮೂರು ತಂಡಗಳಲ್ಲಿ ಪ್ರತಿ ವಿಭಾಗದಿಂದ ಕನಿಷ್ಠ 5 ಅಧಿಕಾರಿಗಳು ಒಟ್ಟು 30 ಅಧಿಕಾರಿಗಳು ಮೀರದಂತೆ ತಪ್ಪದೇ ತರಬೇತಿಗೆ ನಿಯೋಜಿಸುವಾಗ ಇತ್ತೀಚೆಗೆ ಪದೋನ್ನತಿ ಹೊಂದಿದ ಅಧಿಕಾರಿಗಳಿಗೆ ಆದ್ಯತೆ ನೀಡುವಂತೆ ತಿಳಿಸುತ್ತಾ ನಿಯೋಜನೆಗೊಂಡ ಅಧಿಕಾರಿಗಳಿಗೆ ತಪ್ಪದೇ ತರಬೇತಿಗೆ ಹಾಜರಾಗುವಂತೆ ನಿರ್ದೇಶನ ನೀಡುವಂತೆ ಕೋರಿರುತ್ತಾರೆ. ಸರ್ಕಾರವು ಮಹಾನಿರ್ದೇಶಕರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಮೂರು ತಂಡಗಳಲ್ಲಿ ಕೆ.ಎ.ಎಸ್. (ಕಿರಿಯ ಶ್ರೇಣಿ) ವೃಂದದ ಅಧಿಕಾರಿಗಳನ್ನು ಪ್ರತಿ ತಂಡದಲ್ಲಿ 30 ಅಧಿಕಾರಿಗಳು ಮೀರದಂತೆ ನಿಯೋಜಿಸಲು ತೀರ್ಮಾನಿಸಿದೆ.

ಮಹಾನಿರ್ದೇಶಕರ ಪ್ರಸ್ತಾವನೆಯನ್ನು ಪರಿಶೀಲಿಸಿ, ಮುಂದಿನಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 169 ಆಸೇಇ 2010, ಬೆಂಗಳೂರು, ದಿನಾಂಕ : 22-5-2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಮೂರು ತಂಡಗಳಲ್ಲಿ ಕೆ.ಎ.ಎಸ್ (ಕಿ.ಶ್ರೇ) ವೃಂದದ ಅಧಿಕಾರಿಗಳನ್ನು ಪ್ರತಿ ತಂಡದಲ್ಲಿ 30 ಅಧಿಕಾರಿಗಳಂತೆ ಮೈಸೂರು ಆಡಳಿತ ತರಬೇತಿ ಸಂಸ್ಥೆಯಲ್ಲಿ ದಿನಾಂಕ 7-6-2010 ರಿಂದ 9-6-2010ರವರೆಗೆ ಮೊದಲನೆ ತಂಡ, ದಿನಾಂಕ 1-7-2010 ರಿಂದ 3-7-2010ರವರೆಗೆ ಎರಡನೇ ತಂಡ ಮತ್ತು ದಿನಾಂಕ 2-8-2010 ರಿಂದ 4-8-2010ರವರೆಗೆ ಮೂರನೇ ತಂಡದಲ್ಲಿ ಅನುಬಂಧದಲ್ಲಿದ್ದಂತೆ ಕೆ.ಎ.ಎಸ್. (ಕಿ.ಶ್ರೇ) ಅಧಿಕಾರಿಗಳನ್ನು ಆಡಳಿತ ತರಬೇತಿ ಸಂಸ್ಥೆ, ಮೈಸೂರು ಇವರು ನಡೆಸಲಿರುವ ಭಾರತ ಸರ್ಕಾರದ ಸಿಬ್ಬಂದಿ ಮತ್ತು ತರಬೇತಿ ಇಲಾಖೆಯ DFID, Training for all ಯೋಜನೆ ಅಡಿಯಲ್ಲಿ Programme on Capacity Building for Revenue Officers ತರಬೇತಿ ಕೋರ್ಸಿಗೆ ನಿಯೋಜಿಸಲಾಗಿದೆ.

ಅಧಿಕಾರಿಗಳು ಸದರಿ ಕೋರ್ಸಿಗೆ ಹಾಜರಾಗುವುದು ಕಡ್ಡಾಯವಾಗಿದ್ದು, ಗೈರು ಹಾಜರಾಗುವವರ ವಿರುದ್ಧ ಶಿಸ್ತು ಕ್ರಮ ಜರುಗಿಸಲಾಗುವುದು. ತರಬೇತಿ ಪಡೆದ ನಂತರ ಅನುಭವಗಳ ಕಿರುವರದಿಯನ್ನು ಒಂದು ವಾರದೊಳಗಾಗಿ ತಪ್ಪದೇ ಸರ್ಕಾರಕ್ಕೆ ಸಲ್ಲಿಸುವಂತೆ ಸೂಚಿಸಲಾಗಿದೆ. ಹಾಗೆಯೇ ಸಂಬಂಧಿಸಿದ ನಿಯಂತ್ರಣಾಧಿಕಾರಿಗಳು ಈ ತರಬೇತಿಗೆ ನಿಯೋಜಿಸಲ್ಪಟಿರುವ ಅಧಿಕಾರಿಗಳನ್ನು ಕರ್ತವ್ಯದಿಂದ ಬಿಡುಗಡೆ ಮಾಡುವಂತೆ ಸೂಚಿಸಿದೆ.

ಈ ತರಬೇತಿಗೆ ನಿಯೋಜಿತರಾಗಿರುವ ಅಧಿಕಾರಿಗಳು ನಿಯಮಾನುಸಾರ ಭತ್ಯೆ ಪಡೆಯಲು ಅರ್ಹರಾಗುತ್ತಾರೆ. ತರಬೇತಿಯ ಅವಧಿ ಹಾಗೂ ಅವಶ್ಯಕ ಪ್ರಯಾಣದ ಅವಧಿಯನ್ನು ಕರ್ತವ್ಯದ ಮೇಲೆ ಎಂದು ಪರಿಗಣಿಸಿದೆ.

ಸದರಿ ತರಬೇತಿ ಕುರಿತ ಹೆಚ್ಚಿನ ಮಾಹಿತಿಗಾಗಿ ಶ್ರೀ ಸಿ. ವೆಂಕಟಸುಬ್ಬಯ್ಯ, ನೋಡಲ್ ಅಧಿಕಾರಿ, ಆಡಳಿತ ತರಬೇತಿ ಸಂಸ್ಥೆ (0821-2481144), ಶ್ರೀ ಎ.ಸಿ. ದಿವಾಕರ, ಬೋಧಕರು (ಅ & ಯೋ), ಆಡಳಿತ ತರಬೇತಿ ಸಂಸ್ಥೆ (9448783202) ಹಾಗೂ ಶ್ರೀ ಸಿ. ಅಶೋಕ, ಬೋಧಕರು ರಾಜ್ಯ ನಗರಾಭಿವೃದ್ಧಿ ಸಂಸ್ಥೆ (9900750181) ಇವರನ್ನು ಸಂಪರ್ಕಿಸಬಹುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**(ಹೆಚ್.ಆರ್. ನಾಗೇಂದ್ರ)**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿ.ಆ.ಸು ಇಲಾಖೆ (ಸೇವೆಗಳು-2)

**ಅನುಬಂಧ-1**

ದಿನಾಂಕ : 7-6-2010 ರಿಂದ 9-6-2010 ರವರೆಗೆ ಮೊದಲನೆ ತಂಡ

| ಕ್ರ. ಸಂ. | ಅಧಿಕಾರಿಯ ಹೆಸರು ಶ್ರೀ/ಶ್ರೀಮತಿ | ಕಾರ್ಯ ನಿರ್ವಹಿಸುತ್ತಿರುವ ಹುದ್ದೆ |
|---|---|---|
| 1 | ವರಕೇಡಿ, ಎಂ.ಪಿ. | ವಿಶೇಷ ಭೂಸ್ವಾಧೀನಾಧಿಕಾರಿ, ಯು.ಕೆ.ಪಿ. ಆಲಮಟ್ಟಿ, ಬಾಗಲಕೋಟೆ ಜಿಲ್ಲೆ |
| 2 | ಸಿ. ಬಸವರಾಜ | ವಿಶೇಷ ಭೂಸ್ವಾಧೀನಾಧಿಕಾರಿ, ಕೆ.ಐ.ಎ.ಡಿ.ಬಿ. (ಬಿ.ಎಂ.ಐ.ಸಿ.ಪಿ), ಬೆಂಗಳೂರು |
| 3 | ಹರಣಿ ವನಜಕುಮಾರಿ | ಸಹಾಯಕ ಆಯುಕ್ತರು, ಭೂಮಿ ನಿರ್ವಹಣಾ ಕೋಶ, ಕಂದಾಯ ಇಲಾಖೆ, ಬೆಂಗಳೂರು |
| 4 | ನೂರುದ್ದೀನ್ ಷರೀಫ್ | ವಿಶೇಷ ಭೂಸ್ವಾಧೀನಾಧಿಕಾರಿ, ಹೇಮಾವತಿ ನೀರಾವರಿ ಯೋಜನೆ, ಹೊಳೆನರಸೀಪುರ, ಹಾಸನ ಜಿಲ್ಲೆ |
| 5 | ಎನ್. ಸೂರ್ಯನಾರಾಯಣ | ಸಹಾಯಕ ಆಯುಕ್ತರು (ಆಡಳಿತ) ಬಿ.ಬಿ.ಎಂ.ಪಿ, ಬೆಂಗಳೂರು |
| 6 | ಬಿ.ಎನ್. ಸತ್ಯನಾರಾಯಣ | ವಿಶೇಷ ಭೂಸ್ವಾಧೀನಾಧಿಕಾರಿ, ರಾಷ್ಟ್ರೀಯ ಹೆದ್ದಾರಿ ಅಭಿವೃದ್ಧಿ ಪ್ರಾಧಿಕಾರ (NHAI), ಬೆಂಗಳೂರು |

| | | |
|---|---|---|
| 7 | ಮೃತ್ಯುಂಜಯ | ವಿಶೇಷ ಭೂಸ್ವಾಧೀನಾಧಿಕಾರಿ, ಕರ್ನಾಟಕ ಗೃಹ ಮಂಡಳಿ, ಬೆಂಗಳೂರು |
| 8 | ಪಿ.ಎಸ್. ಶಿವಪುತ್ರಪ್ಪ | ಸಹಾಯಕ ಆಯುಕ್ತರು (ಕಂದಾಯ), ಗುಲ್ಬರ್ಗಾ ಮಹಾನಗರ ಪಾಲಿಕೆ, ಗುಲ್ಬರ್ಗಾ |
| 9 | ಸಿ.ಎನ್. ಶ್ರೀಧರ್ | ಆಯುಕ್ತರು, ನಗರ ಸಭೆ, ಸಿರ್ಸಿ, ಉತ್ತರ ಕನ್ನಡ ಜಿಲ್ಲೆ |
| 10 | ಎಂ. ಸತೀಶ್ ಕುಮಾರ್ | ವಿಶೇಷ ಭೂಸ್ವಾಧೀನಾಧಿಕಾರಿ, ಬಿ.ಎಂ.ಆರ್.ಸಿ.ಎಲ್., ಬೆಂಗಳೂರು |
| 11 | ಪಿ. ಲಕ್ಷಮ್ಮ | ಸಹಾಯಕ ಆಯುಕ್ತರು, ಅನಧಿಕೃತ ಕಟ್ಟಡಗಳ ತಡೆ ಕೋಶ, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು |
| 12 | ಷಣ್ಮುಖ, ಡಿ. | ವಿಶೇಷ ಭೂಸ್ವಾಧೀನಾಧಿಕಾರಿ, ಯು.ಕೆ.ಪಿ., ಬಾಗಲಕೋಟೆ |
| 13 | ಅಚ್ಚುತ, ಪಿ. | ವಿಶೇಷ ಸಹಾಯಕ ಆಯುಕ್ತರು, ಭೂ ನ್ಯಾಯಮಂಡಳಿ, ಉಡುಪಿ |
| 14 | ಮೇರಿ ಮಥಾಯಿಸ್ | ವಿಶೇಷ ಸಹಾಯಕ ಆಯುಕ್ತರು, ಭೂ ನ್ಯಾಯ ಮಂಡಳಿ, ಕುಂದಾಪುರ |
| 15 | ಕಾವೇರಿಯಪ್ಪ, ಕೆ.ಟಿ. | ಫಾರೆಸ್ಟ್ ಸೆಟ್ಲ್‌ಮೆಂಟ್ ಆಫೀಸರ್, ಮಂಗಳೂರು |
| 16 | ಟಿ. ವಿಜಯ | ಸಹಾಯಕ ಆಯುಕ್ತರು, ಮೈಸೂರು ಮಹಾನಗರ ಪಾಲಿಕೆ, ಮೈಸೂರು |
| 17 | ವಿಜಯಲಕ್ಷ್ಮಿ ಪೋಳ | ಪುನರ್ವಸತಿ ಅಧಿಕಾರಿ, ಬಾಗಲಕೋಟೆ ಅಭಿವೃದ್ಧಿ ಪ್ರಾಧಿಕಾರ, ಬಾಗಲಕೋಟೆ |
| 18 | ವಿ.ಬಿ. ದಾಮ್ಮಣ್ಣವರ್ | ಕಂದಾಯ ಅಧಿಕಾರಿ, ಬೆಳಗಾವಿ ಮಹಾನಗರ ಪಾಲಿಕೆ, ಬೆಳಗಾವಿ |
| 19 | ವಿ. ಶಶಿಕಲಾ | ವಿಶೇಷ ಭೂಸ್ವಾಧೀನಾಧಿಕಾರಿ, ಸಿಂಧನೂರು ಮೆಹಬೂಬ್‌ನಗರ ರೈಲ್ವೇ ಯೋಜನೆ, ಸಿಂಧನೂರು, ರಾಯಚೂರು |
| 20 | ಎಂ. ಶ್ರೀರಾಮ ರೆಡ್ಡಿ | ಸಹಾಯಕ ಯೋಜನಾಧಿಕಾರಿ, ಡಿ.ಆರ್.ಡಿ.ಎ ಬೆಂಗಳೂರು ನಗರ ಜಿಲ್ಲಾ ಪಂಚಾಯತ್, ಬೆಂಗಳೂರು |
| 21 | ಡಿ.ಪಿ. ವೆಂಕಟೇಶ್ | ವಿಶೇಷ ಭೂಸ್ವಾಧೀನಾಧಿಕಾರಿ, ಕಾವೇರಿ ನೀರಾವರಿ ನಿಗಮ, ರಾಮನಗರ |
| 22 | ಮುನಿಸ್ವಾಮಿ | ವಿಶೇಷ ಭೂಸ್ವಾಧೀನಾಧಿಕಾರಿ, ತುಂಗಾ ಮೇಲ್ದಂಡೆ ಯೋಜನೆ, ರಾಣೆಬೆನ್ನೂರು |
| 23 | ಮಾಳಿಗೆ ಶಂಕರ್ | ವಿಶೇಷ ಭೂಸ್ವಾಧೀನಾಧಿಕಾರಿ, ಕೆ.ಐ.ಎ.ಡಿ.ಬಿ., ಮೈಸೂರು |
| 24 | ಹೆಚ್.ಕೆ. ಕೃಷ್ಣಮೂರ್ತಿ | ವಿಶೇಷ ಭೂಸ್ವಾಧೀನಾಧಿಕಾರಿ, ಕಬಿನಿ ನೀರಾವರಿ ಯೋಜನೆ-2 ಮೈಸೂರು |
| 25 | ಬಿ. ಬೋರಯ್ಯ | ಸಹಾಯಕ ಆಯುಕ್ತರು (ಜಾರಿದಳ), ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ, ಬೆಂಗಳೂರು |
| 26 | ಆರ್. ವೆಂಕಟೇಶ | ಉಪ ವಿಭಾಗಾಧಿಕಾರಿ, ಬಳ್ಳಾರಿ ಉಪ ವಿಭಾಗ, ಬಳ್ಳಾರಿ ಜಿಲ್ಲೆ |
| 27 | ಮಳ್ಳಿ ಶರಣಬಸಪ್ಪ | ಉಪ ವಿಭಾಗಾಧಿಕಾರಿ, ಕೊಪ್ಪಳ ಉಪ ವಿಭಾಗ, ಕೊಪ್ಪಳ ಜಿಲ್ಲೆ |
| 28 | ಮಾಣಿಕಪ್ಪ ಮಂಗಳಗಿ | ವಿಶೇಷ ಭೂಸ್ವಾಧೀನಾಧಿಕಾರಿ, ಕಾರಂಜ ಯೋಜನೆ, ಬೀದರ್ |
| 29 | ಸುರೇಶ್ ಜಿರ್ಲೆ | ಉಪ ವಿಭಾಗಾಧಿಕಾರಿ, ಗದಗ ಉಪ ವಿಭಾಗ, ಗದಗ |
| 30 | ನಾಗೇಂದ್ರಪ್ಪ, ಜಿ.ಕೆ. | ಪರಿಷತ್ ಕಾರ್ಯದರ್ಶಿ, ಹುಬ್ಬಳ್ಳಿ-ಧಾರವಾಡ ಮಹಾನಗರ ಪಾಲಿಕೆ, ಹುಬ್ಬಳ್ಳಿ |

**(ಹೆಚ್.ಆರ್. ನಾಗೇಂದ್ರ)**

ಸರ್ಕಾರದ ಅಧೀನ ಕಾರ್ಯದರ್ಶಿ

ಸಿ.ಆ.ಸು ಇಲಾಖೆ (ಸೇವೆಗಳು-2)

**ಅನುಬಂಧ–2**

ದಿನಾಂಕ : 1–7–2010 ರಿಂದ 3–7–2010 ರವರೆಗೆ ಎರಡನೇ ತಂಡ

| ಕ್ರ. ಸಂ. | ಅಧಿಕಾರಿಯ ಹೆಸರು ಶ್ರೀಯುತರು | ಕಾರ್ಯ ನಿರ್ವಹಿಸುತ್ತಿರುವ ಹುದ್ದೆ |
|---|---|---|
| 1 | ಚಿಕ್ಕಬೆಟ್ಟಯ್ಯ, ಕೆ.ಬಿ. | ಸಹಾಯಕ ಆಯುಕ್ತರು, ಗ್ಯಾಸ್ ಅಥಾರಿಟಿ ಆಫ್ ಇಂಡಿಯಾ ಲಿಮಿಟೆಡ್, ಬೆಂಗಳೂರು |
| 2 | ಕಾಂತರಾಜ್, ಪಿ.ಎಸ್. | ವಿಶೇಷ ಭೂಸ್ವಾಧೀನಾಧಿಕಾರಿ, ಮೈಸೂರು ಅಭಿವೃದ್ಧಿ ಪ್ರಾಧಿಕಾರ, ಮೈಸೂರು |
| 3 | ಗಾಯತ್ರಿ, ಕೆ.ಎಂ. | ಪರಿಷತ್ ಕಾರ್ಯದರ್ಶಿ, ಮೈಸೂರು ಮಹಾನಗರ ಪಾಲಿಕೆ, ಮೈಸೂರು |
| 4 | ಫ್ರಾನ್ಸೀಸ್ ವಸಂತ್ ಕುಮಾರ್, ಡಿ.ಆರ್. | Asst, Metropolitan Commissioner, Bangalore Metropolitan Regional Devp. Authority, Bangalore-52 |
| 5 | ಚೌಹಾಣ್, ಡಿ.ಪಿ | ಉಪ ವಿಭಾಗಾಧಿಕಾರಿ, ರಾಯಚೂರು ಉಪ ವಿಭಾಗ, ರಾಯಚೂರು |
| 6 | ರಾಘವೇಂದ್ರ ಹೆಚ್.ಎಸ್. | ಅಧೀನ ಕಾರ್ಯದರ್ಶಿ, Karnataka State Human Rights Commission, Bangalore-01 |
| 7 | ಈಶ್ವರಪ್ಪ | ವಿಶೇಷ ಭೂಸ್ವಾಧೀನಾಧಿಕಾರಿ, ಸಿಂಗಟಾಲೂರು ಏತ ನೀರಾವರಿ ಯೋಜನೆ, ಬಳ್ಳಾರಿ |
| 8 | ಸಂಗಪ್ಪ | ಉಪ ವಿಭಾಗಾಧಿಕಾರಿ, ಗುಲ್ಬರ್ಗಾ ಉಪ ವಿಭಾಗ, ಗುಲ್ಬರ್ಗಾ |
| 9 | ಪ್ರವೀಣ್ ಕುಮಾರ್, ಜಿ.ಎಲ್. | ಉಪ ವಿಭಾಗಾಧಿಕಾರಿ, ಸಾಗರ ಉಪ ವಿಭಾಗ, ಶಿವಮೊಗ್ಗ |
| 10 | ಅಲ್ಲಪ್ಪ. ಆರ್ | ವಿಶೇಷ ಭೂಸ್ವಾಧೀನಾಧಿಕಾರಿ, Indian Oil Corporation, ಬೆಂಗಳೂರು |
| 11 | ಶಿವಯ್ಯ, ಬಿ. | ವಿಶೇಷ ಭೂಸ್ವಾಧೀನಾಧಿಕಾರಿ, ಹೇಮಾವತಿ ನೀರಾವರಿ ಯೋಜನೆ (ಪುನರ್ವಸತಿ), ಹಾಸನ |
| 12 | ಮೋಹನ್ ರಾಜು, ಎಸ್.ಟಿ. | ವಿಶೇಷ ಭೂಸ್ವಾಧೀನಾಧಿಕಾರಿ, ರಾಷ್ಟ್ರೀಯ ಹೆದ್ದಾರಿಗಳು, ಧಾರವಾಡ |
| 13 | ಪ್ರಕಾಶ್. ಜಿ.ಟಿ. ನಿಟ್ಟಾಲಿ | ವಿಶೇಷ ಭೂಸ್ವಾಧೀನಾಧಿಕಾರಿ, ಹಿಪ್ಪರಗಿ ಯೋಜನೆ, ಅಥಣಿ, ಬೆಳಗಾಂ |
| 14 | ಸದಾಶಿವ ಪ್ರಭು, ಬಿ. | ಸಹಾಯಕ ಆಯುಕ್ತರು, ಭೂ ನ್ಯಾಯ ಮಂಡಳಿ, ಮಂಗಳೂರು |
| 15 | ಶಶಿಧರ್ ಕುರೇರ | ಉಪ ವಿಭಾಗಾಧಿಕಾರಿ, ತರೀಕೆರೆ ಉಪ ವಿಭಾಗ, ಚಿಕ್ಕಮಗಳೂರು ಜಿಲ್ಲೆ |
| 16 | ಪದ್ಮ ಬಸವಂತಪ್ಪ | ಕಂದಾಯ ಅಧಿಕಾರಿ, ಹುಬ್ಬಳ್ಳಿ–ಧಾರವಾಡ ಮುನಿಸಿಪಲ್ ಕಾರ್ಪೊರೇಶನ್, ಹುಬ್ಬಳ್ಳಿ |
| 17 | ಇಬ್ರಾಹಿಂ ಮೈಗೂರ್ | ವಿಶೇಷ ಭೂಸ್ವಾಧೀನಾಧಿಕಾರಿ, ಕೃಷ್ಣ ಮೇಲ್ದಂಡೆ ಯೋಜನೆ, ಜಮಖಂಡಿ |
| 18 | ಪ್ರಸನ್ನ, ಹೆಚ್ | ಸಹಾಯಕ ಆಯುಕ್ತರು, ಬಸವ ಕಲ್ಯಾಣ ಉಪ ವಿಭಾಗ, ಬಸವ ಕಲ್ಯಾಣ, ಬೀದರ್ |
| 19 | ಹೆಚ್.ಎಸ್. ರಾಮಕೃಷ್ಣ | ವಿಶೇಷ ಭೂಸ್ವಾಧೀನಾಧಿಕಾರಿ, ಕೆ.ಐ.ಎ.ಡಿ.ಬಿ, ಬೆಂಗಳೂರು |

| | | |
|---|---|---|
| 20 | ಲಿಂಗಮೂರ್ತಿ, ಜಿ. | ವಿಶೇಷ ಭೂಸ್ವಾಧೀನಾಧಿಕಾರಿ, ನಗರಾಭಿವೃದ್ಧಿ ಪ್ರಾಧಿಕಾರ, ದಾವಣಗೆರೆ |
| 21 | ಡಾ॥ ವಾಸಂತಿ ಅಮರ್, ಬಿ.ವಿ. | ಯೋಜನಾ ವ್ಯವಸ್ಥಾಪಕರು, ಕರ್ನಾಟಕ ಕೊಳಚೆ ನಿರ್ಮೂಲನಾ ಮಂಡಳಿ, ಬೆಂಗಳೂರು |
| 22 | ಸೋಮಶೇಖರ್,ಎಸ್.ಟಿ. | ಸಹಾಯಕ ಆಯುಕ್ತರು, (LAQ), KSHIP, ಬೆಳಗಾಂ |
| 23 | ಡಾ॥ ಮಹೇಶ್, ಎಂ. | ಉಪ ಕಾರ್ಯದರ್ಶಿ, ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ, ಬೆಂಗಳೂರು |
| 24 | ನವೀನ್‌ಕುಮಾರ್ ರಾಜು, ಎಸ್. | ವಿಶೇಷ ಭೂಸ್ವಾಧೀನಾಧಿಕಾರಿ, ಹುಬ್ಬಳ್ಳಿ ಅಂಕೋಲ ರೈಲ್ವೆ ಬ್ರಾಡ್‌ಗೇಜ್ ಯೋಜನೆ, ಕಾರವಾರ |
| 25 | ಶಿಲ್ಪ, ಎಂ | ಆಡಳಿತಾಧಿಕಾರಿ, ಕರ್ನಾಟಕ ಭೂಸೇನಾ ನಿಗಮ, ಬೆಂಗಳೂರು |
| 26 | ರೂಪಾ, ಐ.ಪಿ. | ಆಡಳಿತಾಧಿಕಾರಿ, ಜಲಾನಯನ ಅಭಿವೃದ್ಧಿ ಇಲಾಖೆ, ಬೆಂಗಳೂರು |
| 27 | ಬಸವರಾಜು, ಎ.ಬಿ. | ಕಾರ್ಯನಿರ್ವಾಹಕ ಅಧಿಕಾರಿ, ತಾಲ್ಲೂಕು ಪಂಚಾಯತಿ, ಹುಣಸೂರು |
| 28 | ನಾಗರಾಜ, ಎನ್.ಎಂ. | ಸಹಾಯಕ ಆಯುಕ್ತರು (ಆರ್. & ಆರ್) ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ, ಬೆಂಗಳೂರು |
| 29 | ಭಾರತಿ, ಡಿ. | ಸಹಾಯಕ ಆಯುಕ್ತರು, ಮೈಸೂರು ಉಪ ವಿಭಾಗ, ಮೈಸೂರು |
| 30 | ಪ್ರಭು, ಜಿ. | ಸಹಾಯಕ ಆಯುಕ್ತರು, ಪಾಂಡವಪುರ ಉಪ ವಿಭಾಗ, ಮಂಡ್ಯ |

**(ಹೆಚ್.ಆರ್. ನಾಗೇಂದ್ರ)**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿ.ಆ.ಸು ಇಲಾಖೆ (ಸೇವೆಗಳು–2)

## ಅನುಬಂಧ–3

ದಿನಾಂಕ : 2–8–2010 ರಿಂದ 4–8–2010 ರವರೆಗೆ ಮೂರನೇ ತಂಡ

| ಕ್ರ. ಸಂ. | ಅಧಿಕಾರಿಯ ಹೆಸರು ಶ್ರೀಯುತರು | ಕಾರ್ಯ ನಿರ್ವಹಿಸುತ್ತಿರುವ ಹುದ್ದೆ |
|---|---|---|
| 1 | ಸುರೇಶ್. ಬಿ. ಇಟ್ನಾಳ್ | ಉಪ ವಿಭಾಗಾಧಿಕಾರಿ, ಹಾವೇರಿ ಉಪ ವಿಭಾಗ, ಹಾವೇರಿ |
| 2 | ಚಂದ್ರಶೇಖರ್, ಎನ್. | ಮನೆ ಬಾಡಿಗೆ ನಿಯಂತ್ರಣಾಧಿಕಾರಿ, ಬೆಂಗಳೂರು ದಕ್ಷಿಣ,ಬೆಂಗಳೂರು |
| 3 | ರೂಪಾಶ್ರೀ | ಉಪ ಕಾರ್ಯದರ್ಶಿ–3, ಬಿ.ಡಿ.ಎ. ಬೆಂಗಳೂರು |
| 4 | ವಿಜಯಕುಮಾರ್, ಸಿ. | ಉಪ ವಿಭಾಗಾಧಿಕಾರಿ, ರಾಮನಗರ ಉಪ ವಿಭಾಗ, ರಾಮನಗರ |
| 5 | ಪೂರ್ಣಿಮಾ, ಬಿ.ಆರ್. | ವಿಶೇಷ ಭೂಸ್ವಾಧೀನಾಧಿಕಾರಿ, ಮಂಡ್ಯ ಜಿಲ್ಲೆ, ಮಂಡ್ಯ |
| 6 | ಸಿದ್ದಯ್ಯ, ಟಿ.ಎಸ್. | ವಿಶೇಷ ಭೂಸ್ವಾಧೀನಾಧಿಕಾರಿ, ತುಂಗ ಯೋಜನೆ, ಶಿವಮೊಗ್ಗ |
| 7 | ವೆಂಕಟೇಶ, ಟಿ. | ಉಪ ವಿಭಾಗಾಧಿಕಾರಿ, ಚಿತ್ರದುರ್ಗ ಉಪ ವಿಭಾಗ, ಚಿತ್ರದುರ್ಗ |
| 8 | ಕುಮಾರ | ಸಹಾಯಕ ಆಯುಕ್ತರು, ತುಮಕೂರ ಉಪ ವಿಭಾಗ, ತುಮಕೂರು |
| 9 | ನಾಗೇಂದ್ರ ಪ್ರಸಾದ್, ಕೆ. | ಸಹಾಯಕ ಆಯುಕ್ತರು, ಸಕಲೇಶಪುರ ಉಪ ವಿಭಾಗ, ಹಾಸನ ಜಿಲ್ಲೆ |
| 10 | ವಿದ್ಯಾಕುಮಾರಿ, ಕೆ. | ಉಪ ವಿಭಾಗಾಧಿಕಾರಿ, ಹುಣಸೂರು ಉಪ ವಿಭಾಗ, ಮೈಸೂರು |
| 11 | ಗಂಗಾಧರಸ್ವಾಮಿ, ಜಿ.ಎಂ. | ಸಹಾಯಕ ಆಯುಕ್ತರು, ಬೆಂಗಳೂರು ಉತ್ತರ, ಬೆಂಗಳೂರು |
| 12 | ಶಿವಪ್ರಸಾದ್, ಪಿ.ಆರ್. | ಉಪ ವಿಭಾಗಾಧಿಕಾರಿ, ದೊಡ್ಡಬಳ್ಳಾಪುರ ಉಪ ವಿಭಾಗ, ದೊಡ್ಡಬಳ್ಳಾಪುರ |

| | | |
|---|---|---|
| 13 | ಡಾ॥ ಅನುರಾಧ, ಕೆ.ಎನ್. | ಉಪ ಆಡಳಿತಾಧಿಕಾರಿ, ಕಾವೇರಿ ನೀರಾವರಿ ಯೋಜನೆ, ಮೈಸೂರು |
| 14 | ಬಾಲಚಂದ್ರ, ಎಸ್.ಎನ್. | ಕಂದಾಯ ಅಧಿಕಾರಿ, ಮೈಸೂರು ಮಹಾನಗರ ಪಾಲಿಕೆ, ಮೈಸೂರು |
| 15 | ವೈಶಾಲಿ, ಎಂ.ಎಲ್. | ಸಹಾಯಕ ಆಯುಕ್ತರು, ಶಿವಮೊಗ್ಗ ಉಪ ವಿಭಾಗ, ಶಿವಮೊಗ್ಗ |
| 16 | ಪ್ರಭುಲಿಂಗ ಕಾವಳಿ ಕಟ್ಟಿ | ಸಹಾಯಕ ಆಯುಕ್ತರು, ಮಂಗಳೂರು ಉಪ ವಿಭಾಗ, ಮಂಗಳೂರು |
| 17 | ಗೋವಿಂದ ರೆಡ್ಡಿ | ಉಪ ವಿಭಾಗಾಧಿಕಾರಿ, ಲಿಂಗಸೂರು ಉಪ ವಿಭಾಗ, ರಾಯಚೂರು ಜಿಲ್ಲೆ |
| 18 | ವಿಜಯಮಹಾಂತೇಶ, ಬಿ. ದಾನಮ್ಮನವರ್ | ಉಪ ವಿಭಾಗಾಧಿಕಾರಿ, ಬೆಳಗಾಂ ಉಪ ವಿಭಾಗ, ಬೆಳಗಾಂ |
| 19 | ರಂಗಪ್ಪ, ಎಸ್. | ಸಹಾಯಕ ಆಯುಕ್ತರು, ಮಂಡ್ಯ ಉಪ ವಿಭಾಗ, ಮಂಡ್ಯ |
| 20 | ಜಹೀರಾ ನಸೀಂ | ಉಪ ವಿಭಾಗಾಧಿಕಾರಿ, ಬೀದರ್ ಉಪ ವಿಭಾಗ, ಬೀದರ್ |
| 21 | ಲತಾಕುಮಾರಿ, ಕೆ.ಎಸ್. | ಉಪ ವಿಭಾಗಾಧಿಕಾರಿ, ಸೇಡಂ ಉಪ ವಿಭಾಗ, ಗುಲ್ಬರ್ಗಾ |
| 22 | ರಾಜಮ್ಮ. ಎ. ಚೌಡರೆಡ್ಡಿ | ವಿಶೇಷ ಭೂಸ್ವಾಧೀನಾಧಿಕಾರಿ, KHB, ಬೆಂಗಳೂರು |
| 23 | ಸತ್ಯಭಾಮ, ಸಿ. | ಸಹಾಯಕ ಆಯುಕ್ತರು (ಜಾಹೀರಾತು), ಬಿ.ಬಿ.ಎಂ.ಪಿ. ಬೆಂಗಳೂರು |
| 24 | ಜಾನಕಿ, ಕೆ.ಎಂ. | ಉಪ ವಿಭಾಗಾಧಿಕಾರಿ, ದಾವಣಗೆರೆ ಉಪ ವಿಭಾಗ, ದಾವಣಗೆರೆ |
| 25 | ಜಗದೀಶ, ಜಿ. | ಉಪ ವಿಭಾಗಾಧಿಕಾರಿ, ಸಿರ್ಸಿ ಉಪ ವಿಭಾಗ, ಉತ್ತರ ಕನ್ನಡ |
| 26 | ಕ್ಯಾಪ್ಟನ್ ಡಾ॥ ರಾಜೇಂದ್ರ, ಕೆ. | ಉಪ ವಿಭಾಗಾಧಿಕಾರಿ, ಜಮಖಂಡಿ ಉಪ ವಿಭಾಗ, ಬಾಗಲಕೋಟೆ |
| 27 | ಕಾಶೀನಾಥ ಪವಾರ್ | ಉಪ ವಿಭಾಗಾಧಿಕಾರಿ, ಹೊಸಪೇಟೆ ಉಪ ವಿಭಾಗ, ಬಳ್ಳಾರಿ |
| 28 | ದಯಾನಂದ, ಕೆ.ಎ. | ಉಪ ವಿಭಾಗಾಧಿಕಾರಿ, ಚಿಕ್ಕಮಗಳೂರು ಉಪ ವಿಭಾಗ, ಚಿಕ್ಕಮಗಳೂರು |
| 29 | ಅರ್ಚನ, ಎಂ.ಎಸ್. | ಸಹಾಯಕ ಆಯುಕ್ತರು (ಜಾಹೀರಾತು), ಬಿ.ಬಿ.ಎಂ.ಪಿ, ಬೆಂಗಳೂರು |
| 30 | ಶ್ರೀನಿವಾಸ, ಕೆ. | ಉಪ ಮುಖ್ಯ ಆಡಳಿತಾಧಿಕಾರಿ, ಖಾದಿ ಮತ್ತು ಗ್ರಾಮೋದ್ಯೋಗ ಮಂಡಳಿ, ಬೆಂಗಳೂರು |

**(ಹೆಚ್.ಆರ್. ನಾಗೇಂದ್ರ)**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿ.ಆ.ಸು ಇಲಾಖೆ (ಸೇವೆಗಳು–2)

ಪಿ.ಆರ್. 1373

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ವಿಷಯ :** 2010–11ನೇ ಸಾಲಿನಲ್ಲಿ ಆಹಾರ ಪಾರ್ಕ್ ಯೋಜನೆ ಅನುಷ್ಠಾನಕ್ಕೆ ಅನುದಾನ ಬಿಡುಗಡೆ ಮಾಡುವ ಬಗ್ಗೆ

**ಓದಲಾಗಿದೆ :**
1) ವಿಶೇಷಾಧಿಕಾರಿಗಳು, ಆಹಾರ ಕರ್ನಾಟಕ ಲಿ., ಇವರ ಪತ್ರ ಸಂಖ್ಯೆ : FKL/32/2010-11,ದಿನಾಂಕ : 26–4–2010.
2) ಆಯುಕ್ತರ, ಪತ್ರ ಸಂಖ್ಯೆ ಎಂಎಸ್ಎಂಇ/ಎಸ್I/ಆಹಾರ ಪಾರ್ಕ್/12/ 2010–11, ದಿನಾಂಕ : 29–4–2010

**ಪ್ರಸ್ತಾವನೆ :**

2010–11ನೇ ಸಾಲಿನ ಆಯವ್ಯಯದಲ್ಲಿ 4851–00–800–5–00–132 ಆಹಾರ ಪಾರ್ಕ್ ಅಡಿಯಲ್ಲಿ ಆಹಾರ ಪಾರ್ಕ್ ಅಭಿವೃದ್ಧಿಗೋಸ್ಕರ ರೂ. 1000–00 ಲಕ್ಷಗಳು ಒದಗಿಸಲಾಗಿರುತ್ತದೆ. ಇದರಲ್ಲಿ ವಿಶೇಷ ಘಟಕ ಯೋಜನೆ, ಹಾಗೂ ಗಿರಿಜನ ಉಪ ಯೋಜನೆ ಅಡಿಯಲ್ಲಿನ ಮೊತ್ತ ಹೊರತು ಪಡಿಸಿ ಉಳಿದ ರೂ. 772.50 ಲಕ್ಷಗಳಲ್ಲಿ ರೂ. 386.25 ಲಕ್ಷಗಳನ್ನು ಬಿಡುಗಡೆ ಮಾಡಲು ಅಪರ ನಿರ್ದೇಶಕರು (ಎಂ.ಎಸ್.ಎಂ.ಇ) ಶಿಫಾರಸ್ಸು ಮಾಡಿದ್ದು, ರೂ. 1000–00 ಲಕ್ಷದಲ್ಲಿ ಆರ್ಥಿಕ ಇಲಾಖೆ ಪ್ರತ್ಯಾಯೋಜಿಕ ಅಧಿಕಾರದ ಸರ್ಕಾರಿ ಆದೇಶ ಸಂಖ್ಯೆ : ಆಇ 1 ಟಿಎಫ್‌ಡಿ 2010, ದಿನಾಂಕ 20–4–2010 ರನ್ವಯ ರೂ. 250.00 ಲಕ್ಷ ಬಿಡುಗಡೆ ಮಾಡಬಹುದಾಗಿದೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ : ಸಿಐ 352 ಎಸ್‌ಪಿಐ 2008 (ಪಿ), ಬೆಂಗಳೂರು, ದಿನಾಂಕ : 26-5-2010**

ಪ್ರಸ್ತಾವನೆಯಲ್ಲಿ ವಿವರಿಸಿದಂತೆ 2010-2011ರ ಆಯವ್ಯಯದಂತೆ ಆಹಾರ ಪಾರ್ಕ್ ಯೋಜನೆಯನ್ನು ಕಾರ್ಯಗತಗೊಳಿಸಲು ಲೆಕ್ಕಶೀರ್ಷಿಕೆ 4851-00-800-5-00-132 ರಡಿಯಲ್ಲಿ ರೂ. 250.00 ಲಕ್ಷಗಳನ್ನು ಆಹಾರ ಕರ್ನಾಟಕ ನಿಯಮಿತ ಅವರಿಗೆ ಬಿಡುಗಡೆ ಮಾಡಿ ಈ ಮೂಲಕ ಆದೇಶಿಸಿದೆ.

ಸದರಿ ಮೊತ್ತವನ್ನು ವಿಶೇಷ ಅಧಿಕಾರಿಗಳು, ಆಹಾರ ಕರ್ನಾಟಕ ನಿಯಮಿತ, ಬೆಂಗಳೂರು ರವರು ಸ್ವೀಕೃತಿ ರಸೀದಿಯನ್ನು ಸಲ್ಲಿಸಿ ಆಯುಕ್ತರು, ಕೈಗಾರಿಕಾಭಿವೃದ್ಧಿ ಹಾಗೂ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆರವರ ಮೇಲು ರುಜು ಪಡೆದು ರಾಜ್ಯ ಹುಜೂರ್ ಖಜಾನೆಯಿಂದ ನಗದೀಕರಿಸಿಕೊಳ್ಳುವಂತೆ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ. ಆರ್. 1374

**(ಅಪರ್ಣ ಪಾವಟೆ)**
ಪೀಠಾಧಿಕಾರಿ (ತಾಂ.ಕೋ)
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

## ವಸತಿ ಸಚಿವಾಲಯ

**ವಿಷಯ :** ನೆರೆಹಾವಳಿ ಸಂತ್ರಸ್ಥರಿಗೆ ಪುನರ್ವಸತಿ ಕಲ್ಪಿಸುವ ಬಗ್ಗೆ.

**ಓದಲಾಗಿದೆ :** 1) ಸರ್ಕಾರದ ಆದೇಶ ಸಂಖ್ಯೆ : ವಇ 16 ಹೆಚ್‌ಎಹೆಚ್ 2010, ದಿನಾಂಕ : 12-3-2010.
2) ಮಾನ್ಯ ಮುಖ್ಯಮಂತ್ರಿಯವರ ಕಾರ್ಯದರ್ಶಿಯವರ ಟಿಪ್ಪಣಿ ಸಂಖ್ಯೆ : ಮುಮಕಾ/ಆಸರೆ/2726/2010, ದಿನಾಂಕ : 18-5-2010

**ಪ್ರಸ್ತಾವನೆ :**

ಕಳೆದ ವರ್ಷ ಉತ್ತರ ಕರ್ನಾಟಕ ಜಿಲ್ಲೆಗಳಲ್ಲಿ ಸುರಿದ ಭಾರಿ ಮಳೆ ಮತ್ತು ನೆರೆಹಾವಳಿಯಿಂದ ಮನೆಗಳನ್ನು ಕಳೆದುಕೊಂಡವರಿಗೆ **"ಆಸರೆ"** ಯೋಜನೆಯಡಿಯಲ್ಲಿ ಮನೆಗಳನ್ನು ನಿರ್ಮಿಸಲಾಗುತ್ತಿದೆ. ಈ ಮನೆಗಳ ಪೈಕಿ ಧಾರವಾಡ ಜಿಲ್ಲೆಯ ಅಹೆಟ್ಟಿ ಗ್ರಾಮದಲ್ಲಿ 55 ಮನೆಗಳನ್ನು ಹಾಗೂ ಬಿಜಾಪುರ ಜಿಲ್ಲೆಯ ತೆಗ್ಗಳ್ಳಿ ಗ್ರಾಮದಲ್ಲಿ 286 ಮನೆಗಳನ್ನು ನಿರ್ಮಿಸಲು ಪ್ರಸ್ತಾಪಿಸಲಾಗಿತ್ತು. ಆದರೆ ಈ ಎರಡು ಗ್ರಾಮಗಳಲ್ಲಿ ಇದುವರೆವಿಗೂ ಭೂಸ್ವಾಧೀನ ಪ್ರಕ್ರಿಯೆಯು ಪೂರ್ಣಗೊಂಡಿಲ್ಲವಾದ್ದರಿಂದ ಈ ಎರಡು ಸ್ಥಳಗಳ ಬದಲಾಗಿ ಬೇರೆ ಸ್ಥಳಗಳಲ್ಲಿ ಮನೆಗಳ ನಿರ್ಮಾಣ ಕೈಗೊಳ್ಳಲು ಈ ಕೆಳಗಿನಂತೆ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ವಇ 16 ಹೆಚ್‌ಎಹೆಚ್ 2010, ಬೆಂಗಳೂರು, ದಿನಾಂಕ : 26ನೇ ಮೇ 2010**

ನೆರೆಹಾವಳಿ ಸಂತ್ರಸ್ಥರಿಗೆ ಪುನರ್ವಸತಿ ಕಲ್ಪಿಸುವುದಕ್ಕಾಗಿ ರಾಜೀವ್ ಗಾಂಧಿ ಗ್ರಾಮೀಣ ವಸತಿ ನಿಗಮಕ್ಕೆ ನಿರ್ಮಾಣ ಕೈಗೊಳ್ಳಲು ವಹಿಸಿಕೊಟ್ಟ ಧಾರವಾಡ ಜಿಲ್ಲೆಯ ಆಹೆಟ್ಟಿ ಗ್ರಾಮದಲ್ಲಿ 55 ಮನೆಗಳು ಹಾಗೂ ಬಿಜಾಪುರ ಜಿಲ್ಲೆಯ ತೆಗ್ಗಳ್ಳಿ ಗ್ರಾಮದಲ್ಲಿ 286 ಮನೆಗಳ ಬದಲಾಗಿ ಧಾರವಾಡ ಜಿಲ್ಲೆಯ ನವಲಗುಂದ ತಾಲ್ಲೂಕಿನ ಅರಹಟ್ಟಿ ಗ್ರಾಮದಲ್ಲಿ 269 ಮನೆಗಳನ್ನು ನಿರ್ಮಿಸುವಂತೆ ರಾಜೀವ್ ಗಾಂಧಿ ಗ್ರಾಮೀಣ ವಸತಿ ನಿಗಮಕ್ಕೆ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ. ಆರ್. 1375

**(ಕೆ.ಆರ್. ವಲ್ಲೂರ)**
ಪೀಠಾಧಿಕಾರಿ-2, ವಸತಿ ಇಲಾಖೆ.

## ಸಮಾಜ ಕಲ್ಯಾಣ ಸಚಿವಾಲಯ

**ವಿಷಯ :** ಡಾಃ ಚಿದಾನಂದ ದುಂಡಪ್ಪ, ಸರಿಕಾರ, ವಕೀಲರು ಇವರನ್ನು ವಿಶೇಷ ನ್ಯಾಯವಾದಿಯಾಗಿ ನೇಮಿಸುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರಿ ಆದೇಶ ಸಂಖ್ಯೆ : ಸಕಇ 38 ಎಸ್‌ಎಡಿ 2005, ದಿನಾಂಕ : 02-07-2007.
2. ಪತ್ರ ಸಂಖ್ಯೆ : ಓ.ಸಂಖ್ಯೆ : 660/2008, ದಿನಾಂಕ : 02-07-2008.
3. ಪತ್ರ ಸಂಖ್ಯೆ : ಜಾವಿ/02/ಸಾಮಾನ್ಯ/ಸಾಹಜಾನಿ : 2006, ದಿನಾಂಕ :21-11-2009.

**ಪ್ರಸ್ತಾವನೆ:**

ರಾಜ್ಯದಲ್ಲಿ ಸುಳ್ಳು ಜಾತಿ ಪ್ರಮಾಣ ಪತ್ರಗಳಿಗೆ ಸಂಬಂಧಿಸಿದ ಪ್ರಕರಣಗಳನ್ನು ನಿರ್ವಹಿಸುವ ಸಲುವಾಗಿ ಮೇಲೆ (1) ರಲ್ಲಿ ಓದಲಾದ ಆದೇಶದಲ್ಲಿ ಶ್ರೀ ಸಿ. ಜಗದೀಶ್ ಇವರನ್ನು ವಿಶೇಷ ನ್ಯಾಯವಾದಿಯಾಗಿ ನೇಮಕ ಮಾಡಲಾಗಿತ್ತು. ಅಂತಹ ಪ್ರಕರಣಗಳನ್ನು ಹೆಚ್ಚು ಪರಿಣಾಮಕಾರಿಯಾಗಿ ನಿರ್ವಹಿಸುವ ದೃಷ್ಟಿಯಿಂದ ಇನ್ನೊಬ್ಬ ವಕೀಲರನ್ನು ವಿಶೇಷ ನ್ಯಾಯವಾದಿಯಾಗಿ ನೇಮಿಸಲು ನಿರ್ಧರಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಸಕಇ 50 ಎಸ್‌ಎಡಿ 2008, ಬೆಂಗಳೂರು, ದಿನಾಂಕ : 12-05-2010**

ಸುಳ್ಳು ಜಾತಿ ಪ್ರಮಾಣ ಪತ್ರಗಳ ಕುರಿತಂತೆ ರಾಜ್ಯದ ಉಚ್ಚ ನ್ಯಾಯಾಲಯ ಹಾಗೂ ಇತರೆ ಅಧೀನ ನ್ಯಾಯಾಲಯಗಳಲ್ಲಿ ಹೂಡಲಾದ ಕ್ರಿಮಿನಲ್ ಮೊಕದ್ದಮೆಗಳಲ್ಲಿ ಸರ್ಕಾರದ ಪರವಾಗಿ ಹಾಜರಾಗಿ ವಾದಿಸಲು ಡಾಃ

ಚಿದಾನಂದ ದುಂಡಪ್ಪ, ಸರಿಕಾರ, ವಕೀಲರು ನಂ. 272/4, ಚೇತನ ಟಾಕೀಸ್ ಹತ್ತಿರ, ನಾಗವಾರ ಪಾಳ್ಯ, ಸಿ.ವಿ.ರಾಮನ್‌ನಗರ, ಬೆಂಗಳೂರು ಇವರನ್ನು ವಿಶೇಷ ನ್ಯಾಯವಾದಿಯಾಗಿ (special councel) ತಕ್ಷಣದಿಂದ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆಗೆ ನೇಮಿಸಲಾಗಿದೆ.

ಡಾಃ ಚಿದಾನಂದ ದುಂಡಪ್ಪ, ಸರಿಕಾರ, ವಕೀಲರು ಇವರು ಈ ಕೆಳಗಿನಂತೆ ಸಂಭಾವನೆ ಪಡೆಯಲು ಅರ್ಹರಾಗಿರುತ್ತಾರೆ.

| Sl.No. | Item | Rs. |
|---|---|---|
| 1. | Reading fee | 5,000.00 per case |
| 2. | Hearing fee | 250.00 per day per case |
| 3. | Junior fee | 1,000.00 per case |
| 4. | Clerical and Miscellaneous fee | 1,000.00 per case |

ಡಾಃ ಚಿದಾನಂದ ದುಂಡಪ್ಪ, ಸರಿಕಾರ, ಇವರು ವ್ಯಾಜಗಳ ವಿಲೇವಾರಿ ಕುರಿತಂತೆ ಅಂಕಿ ಅಂಶ ನಮೂದಿಸಿ ಸರ್ಕಾರಕ್ಕೆ ಪ್ರತಿ ತ್ರೈಮಾಸಿಕ ವರದಿಯನ್ನು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ಈ ಸಂಬಂಧದ ವೆಚ್ಚವನ್ನು ಪರಿಶಿಷ್ಟ ಜಾತಿ ಉಪಯೋಜನೆ ಮತ್ತು ಗಿರಿಜನ ಉಪಯೋಜನೆ (ಕ್ರೋಢೀಕೃತ ಅನುದಾನ) ಅಡಿ ಭರಿಸತಕ್ಕದ್ದು.

ಇದಕ್ಕೆ ಕಾನೂನು, ನ್ಯಾಯ ಮಾನವ ಹಕ್ಕುಗಳ ಇಲಾಖೆ ಹಾಗೂ ಆರ್ಥಿಕ ಇಲಾಖೆ ಇವರ ಸಹಮತಿಯನ್ನು ಕ್ರಮವಾಗಿ ಟಿಪ್ಪಣಿ ಸಂಖ್ಯೆ : ಲಾ/ಎಎಲ್‌ಎಸ್–1/1504/2009, ದಿನಾಂಕ : 11–12–2009 ಮತ್ತು ಟಿಪ್ಪಣಿ ಸಂಖ್ಯೆ : ಆಇ 749 ವೆಚ್ಚ – 3/2010, ದಿನಾಂಕ : 29–01–2010ರಲ್ಲಿ ಪಡೆಯಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1376

**ಎಸ್. ಲೋಕನಾಥ ರಾವ್**

ಸರ್ಕಾರದ ಅಧೀನ ಕಾರ್ಯದರ್ಶಿ–2

ಸಮಾಜ ಕಲ್ಯಾಣ ಇಲಾಖೆ

**ಒಳಾಡಳಿತ ಸಚಿವಾಲಯ**

**ವಿಷಯ :** ಶ್ರೀ ಸಂಗಮೇಶ ಸಾತಗೊಂಡ ಎನ್ನುವವರ ಕೊಲೆ ಬಗ್ಗೆ ಬಿಜಾಪುರ ಜಿಲ್ಲೆಯ ಬಬಲೇಶ್ವರ ಪೊಲೀಸ್ ಠಾಣೆಯಲ್ಲಿ ದಾಖಲಾದ ಮೊಕದ್ದಮೆ ಸಂ. 159/08ನ್ನು ಸಿ.ಐ.ಡಿಗೆ ವರ್ಗಾಯಿಸುವ ಬಗ್ಗೆ.

**ಓದಲಾಗಿದೆ :** 1. ಪ್ರಕರಣ ಸಂ. 4303/09ರಲ್ಲಿ ಕರ್ನಾಟಕ ರಾಜ್ಯ ಮಾನವ ಹಕ್ಕುಗಳ ಆಯೋಗವು ದಿನಾಂಕ 08–03–2010ರಂದು ಮಾಡಿರುವ ಆದೇಶ.

**ಪ್ರಸ್ತಾವನೆ:**

ಶ್ರೀ ಎಂ.ಪಿ. ಆಸಂಗಿ, ಎಂಬುವವರು ರಾಜ್ಯ ಮಾನವ ಹಕ್ಕುಗಳ ಆಯೋಗಕ್ಕೆ ದೂರು ಸಲ್ಲಿಸಿ ತಮ್ಮ ಸಂಬಂಧಿ ಶ್ರೀ ಸಂಗಮೇಶ ಸಾತಗೊಂಡ ಎನ್ನುವವರನ್ನು ಕೊಲೆ ಮಾಡಲಾಗಿದ್ದು ಈ ಬಗ್ಗೆ ಬಿಜಾಪುರ ಜಿಲ್ಲೆಯ ಬಬಲೇಶ್ವರ ಪೊಲೀಸ್ ಠಾಣೆಯಲ್ಲಿ ಶರಣಪ್ಪ ಬಬಲಾದಿ ಮತ್ತು ಇತರರ ಮೇಲೆ ಮೊ.ಸಂ. 159/08 ದಾಖಲಾಗಿದ್ದು ಕೊಲೆಯ ತನಿಖೆಯ ಬಗ್ಗೆ ಸಂಶಯ ವ್ಯಕ್ತಪಡಿಸಿದ್ದು ಇದನ್ನು ಸಿ.ಐ.ಡಿ.ಗೆ ವರ್ಗಾಯಿಸುವಂತೆ ಕೋರಿರುತ್ತಾರೆ. ಮೇಲೆ ಓದಲಾದ ಆದೇಶದಲ್ಲಿ ಕರ್ನಾಟಕ ರಾಜ್ಯ ಮಾನವ ಹಕ್ಕುಗಳ ಆಯೋಗವು ಈ ದೂರನ್ನು ಪರಿಶೀಲಿಸಿ ಬಿಜಾಪುರ ಜಿಲ್ಲೆಯ ಬಬಲೇಶ್ವರ ಪೊಲೀಸ್ ಠಾಣೆಯ ಮೊ.ಸಂ. 159/08ನ್ನು ತನಿಖೆಗಾಗಿ ಸಿ.ಐ.ಡಿ.ಗೆ ವರ್ಗಾಯಿಸುವಂತೆ ಆದೇಶಿಸಿದೆ.

ಆದುದರಿಂದ ಈ ಆದೇಶ.

**ಆದೇಶ ಸಂಖ್ಯೆ: ಒಇ 75 ಸಿಐಡಿ 2010, ಬೆಂಗಳೂರು, ದಿನಾಂಕ : 24–05–2010**

ಮೇಲೆ ವಿವರಿಸಿರುವ ಹಿನ್ನೆಲೆಯಲ್ಲಿ ಬಿಜಾಪುರ ಜಿಲ್ಲೆಯ ಬಬಲೇಶ್ವರ ಪೊಲೀಸ್ ಠಾಣೆಯ ಮೊಕದ್ದಮೆ ಸಂ. 159/08ನ್ನು ಮುಂದಿನ ತನಿಖೆಗಾಗಿ ಸಿ.ಐ.ಡಿ.ಗೆ ವರ್ಗಾಯಿಸಲು ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ.

ಜಿಲ್ಲಾ ಪೊಲೀಸ್ ವರಿಷ್ಠಾಧಿಕಾರಿಗಳು, ಬಿಜಾಪುರ ಇವರು ಪ್ರಕರಣಕ್ಕೆ ಸಂಬಂಧಿಸಿದ ಕಡತವನ್ನು ಸಿ.ಐ.ಡಿ. ತಂಡಕ್ಕೆ ಹಸ್ತಾಂತರಿಸಲು ಅಗತ್ಯ ಕ್ರಮ ತೆಗೆದುಕೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1377

**ಪಿ. ಶಿವರಾಮ ಭಟ್**

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ (ಅಪರಾಧಗಳು)

**ಇಂಧನ ಸಚಿವಾಲಯ**

**ಸೇರ್ಪಡೆ**

**ಸಂಖ್ಯೆ : ಇಎನ್ 331 ಎನ್‌ಸಿಇ 2007 ಬೆಂಗಳೂರು, ದಿನಾಂಕ : 25–05–2010**

ಸರ್ಕಾರಿ ಆದೇಶ ಸಂಖ್ಯೆ : ಇಎನ್ 331 ಎನ್‌ಸಿಇ 2007 ದಿನಾಂಕ : 25–06–2009ರ ಆದೇಶ ಭಾಗದ ಮೊದಲನೆ ಕಂಡಿಕೆಯಲ್ಲಿ ಈ ಕೆಳಗಿನಂತೆ ಸೇರಿಸಿಕೊಂಡು ಓದಿಕೊಳ್ಳತಕ್ಕದ್ದು :–

" Weir-Longitude : $75^0$21'55" Latitude : $13^0$14'42"

ಪಿ.ಆರ್. 1378

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಸ್.ಜಿ. ಸಂಪತ್ ಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ

ಇಂಧನ ಇಲಾಖೆ

**ಸಹಕಾರ ಸಚಿವಾಲಯ**

**ವಿಷಯ :** ರೈತರ ವ್ಯವಸಾಯೋತ್ಪನ್ನ ಮಾರಾಟ ಸಹಕಾರ ಸಂಘ ನಿಯಮಿತ, ಮಂಡ್ಯ ಇದರ 2008–09 ನೇ ಸಾಲಿನ ಸರ್ವ ಸದಸ್ಯರ ಸಭೆಯನ್ನು ನಡೆಸಲು ಕಾಲಾವಕಾಶ ವಿಸ್ತರಿಸುವ ಬಗ್ಗೆ.

**ಓದಲಾಗಿದೆ :** ಸಹಕಾರ ಸಂಘಗಳ ನಿಬಂಧಕರು, ಬೆಂಗಳೂರು ಇವರ ಪತ್ರ ಸಂಖ್ಯೆ : ಎಂಕೆಟಿ–2/129/ಎಂಸಿಎಸ್/2009–10 ದಿನಾಂಕ : 17–03–2010.

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ : 17–03–2010ರ ಪತ್ರದಲ್ಲಿ ಸಹಕಾರ ಸಂಘಗಳ ನಿಬಂಧಕರು, ಬೆಂಗಳೂರು ಇವರು ರೈತರ ವ್ಯವಸಾಯೋತ್ಪನ್ನ ಮಾರಾಟ ಸಹಕಾರ ಸಂಘ ನಿಯಮಿತ, ಮಂಡ್ಯ ಇದರ 2008–09 ನೇ ಸಾಲಿನ ಲೆಕ್ಕಪರಿಶೋಧನ ಕಾರ್ಯವು ಪ್ರಗತಿಯಲ್ಲಿದ್ದು ಮತ್ತು ಸಂಘದ ವಿಶೇಷಾಧಿಕಾರಿಗಳಾಗಿರುವ ಸಹಕಾರ ಸಂಘಗಳ ಜಂಟಿ ನಿಬಂಧಕರು, ಮೈಸೂರು ಪ್ರಾಂತ, ಮೈಸೂರು ರವರು ಪ್ರಸ್ತುತ 2010ನೇ ಮಾರ್ಚ್ ಅಂತ್ಯಕ್ಕೆ ಸಹಕಾರ ಸಂಘಗಳ ಚುನಾವಣೆಗಳು ನಡೆಯುವುದರಿಂದ, ಈ ಸಂದರ್ಭದಲ್ಲಿ ಪ್ರಾಂತದ 08 ಜಿಲ್ಲೆಗಳ ಚುನಾವಣೆ ಕಾರ್ಯದ ಮೇಲುಸ್ತುವಾರಿ ನೋಡಿಕೊಳ್ಳುವ ಜವಾಬ್ದಾರಿ ಹೊಂದಿರುವುದರಿಂದ ಹಾಗೂ ಗ್ರಾಮ ಪಂಚಾಯತಿ ಚುನಾವಣೆ ಕೂಡ ನಡೆಯಲಿರುವುದರಿಂದ ದಿನಾಂಕ : 02–02–2010 ರಂದು ಜರುಗಿದ ಸಂಘದ ವಿಶೇಷಾಧಿಕಾರಿಗಳ ಸಭೆಯಲ್ಲಿ ಚರ್ಚಿಸಿ ಸಂಘದ 2008–09ನೇ ಸಾಲಿನ ವಾರ್ಷಿಕ ಮಹಾ ಸಭೆಯನ್ನು ನಡೆಸಲು ಮತ್ತೆ ಆರು (06) ತಿಂಗಳ ಕಾಲಾವಕಾಶವನ್ನು ಕೋರಿದ್ದು, ಈ ಬಗ್ಗೆ ವಾರ್ಷಿಕ ಮಹಾ ಸಭೆಯಲ್ಲಿ ಚರ್ಚಿಸಿದ್ದು, ಕೆಲವು ಸದಸ್ಯರುಗಳು ಆಡಿಟ್ ವರದಿಯೊಂದಿಗೆ ಮಹಾ ಸಭೆ ನಡೆಸಬೇಕೆಂದು ತಾತ್ಕಾಲಿಕ ಆಡಿಟ್ ವರದಿ ಮಂಡಿಸಬಾರದೆಂದು ಮನವಿ ಮಾಡಿರುವುದರಿಂದ ಸಂಘದ ವಿಶೇಷಾಧಿಕಾರಿಗಳ ಕೋರಿಕೆಯಂತೆ ಹಾಗೂ ಸಹಕಾರ ಸಂಘಗಳ ಜಂಟಿ ನಿಬಂಧಕರು, ಮೈಸೂರು ಪ್ರಾಂತ, ಮೈಸೂರು ರವರ ಶಿಫಾರಸ್ಸಿನಂತೆ ಸಂಘದ 2008–09ನೇ ಸಾಲಿನ ಸರ್ವ ಸದಸ್ಯರ ಮಹಾ ಸಭೆಯನ್ನು ದಿನಾಂಕ : 01–04–2010 ರಿಂದ 30–09–2010 ರೊಳಗೆ ನಡೆಸಲು ಕಾಲಾವಕಾಶ ವಿಸ್ತರಿಸಿ ಆದೇಸ ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಮೇಲಿನ ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಇ 74 ಸಂಮಾಸ 2010, ಬೆಂಗಳೂರು, ದಿನಾಂಕ : 19–05–2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ, ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಕಲಂ 121–ಇ ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ರೈತರ ವ್ಯವಸಾಯೋತ್ಪನ್ನ ಮಾರಾಟ ಸಹಕಾರ ಸಂಘ ನಿಯಮಿತ, ಮಂಡ್ಯ ಇದರ 2008–09ನೇ ಸಾಲಿನ ವಾರ್ಷಿಕ ಮಹಾ ಸಭೆಯನ್ನು ದಿನಾಂಕ : 30–09–2010 ರೊಳಗೆ ನಡೆಸಲು ಕಾಲಾವಕಾಶವನ್ನು ವಿಸ್ತರಿಸಿ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಕಲಂ 27(1)ರ ಉಪ ಬಂಧಗಳನ್ನು ಮಾರ್ಪಡಿಸಿ ಅನುಮತಿ ನೀಡಲಾಗಿದೆ.

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಕಲಂ 27(1)ರ ಉಪ ಬಂಧಕ್ಕೆ ಮಾಡಿದ ಈ ಮಾರ್ಪಾಡು ದಿನಾಂಕ : 30–09–2010ರ ವರೆಗೆ ಜಾರಿಯಲ್ಲಿರತಕ್ಕದ್ದು. ಈ ಅವಧಿ ಮುಗಿದ ನಂತರ ಈ ಆದೇಶದ ಮಾರ್ಪಾಡಿಗೆ ಮೊದಲು ಜಾರಿಯಲ್ಲಿದ್ದಂತೆ ಸದರಿ 27(1)ರ ಕಲಂನ ಉಪ ಬಂಧಗಳು ಪುನಃ ಜಾರಿಗೆ ಬರತಕ್ಕದ್ದು.

ಪಿ.ಆರ್. 1379

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ನಂಜುಂಡಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ

ಸಹಕಾರ ಇಲಾಖೆ

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಕೊಡಗು ಜಿಲ್ಲೆ, ಸೋಮವಾರಪೇಟೆ ತಾಲ್ಲೂಕು, ಗುಡುಗಳಲೆ ಗ್ರಾಮದ ಪ್ರದೇಶವನ್ನು ನಾಲೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಂಡಿರುವ ಜಮೀನಿಗೆ ನ್ಯಾಯಾಲಯದ ಆದೇಶದಂತೆ ಮುಂಗಡ ಹಣ ಠೇವಣಿ ಮಾಡುವ ಬಗ್ಗೆ.

**ಓದಲಾಗಿದೆ :** 1. ಎಕ್ಸಿಕ್ಯೂಷನ್ ನಂ. 123/95ರಲ್ಲಿ ಮಡಿಕೇರಿ ಸಿವಿಲ್ ನ್ಯಾಯಾಲಯವು ದಿನಾಂಕ : 10–02–2010 ರಂದು ನೀಡಿದ ತೀರ್ಪು.

2. ಆದೇಶ ಸಂಖ್ಯೆ : ಆರ್‌ಡಿ 3 ಭೂಸ್ವಾದ 2010(ಎಲ್‌ಸಿ), ದಿನಾಂಕ : 11–03–2010.

3. ಉಚ್ಚ ನ್ಯಾಯಾಲಯದ ಸರ್ಕಾರಿ ವಕೀಲರ ದಿನಾಂಕ 09–04–2010ರ ಫ್ಯಾಕ್ಸ್ ಸಂದೇಶ.

4. ದಿನಾಂಕ : 24–05–2010ರಂದು ಕೊನೆಗೊಂಡಿರುವ ಪತ್ರ ಸಂಖ್ಯೆ : ಮುಸದ/ಲೆಶಾಖೆ/ಲೆಸ–1/ಭೂಸ್ವಾಧೀನ/10–11/1175.

**ಪ್ರಸ್ತಾವನೆ:**

ಕೊಡಗು ಜಿಲ್ಲೆ, ಸೋಮವಾರಪೇಟೆ ತಾಲ್ಲೂಕು, ಗುಡುಗಳಲೆ ಗ್ರಾಮದಲ್ಲಿ ಶಾಂತವೇರಿ ಪಿಕಪ್ ಕಾಲುವೆ ನಿರ್ಮಿಸಲು ಸದರಿ ಗ್ರಾಮದ ಸ.ನಂ. 19/2, 19/4, 77/2 ಮತ್ತು 77/4ರ ಜಮೀನುಗಳನ್ನು ಹಾಗೂ ಹರೇ ಹೊಸೂರು ರಸ್ತೆ ನಿರ್ಮಿಸಲು ಹುಲ್ಸೆ ಗ್ರಾಮದ ಸ.ನಂ. 63/3 ಮತ್ತು 63/4ರ ಜಮೀನುಗಳನ್ನು ಸ್ವಾಧೀನಪಡಿಸಿಕೊಂಡಿರುವ ಬಗ್ಗೆ ಹೆಚ್ಚುವರಿ ಪರಿಹಾರ ಧನಕ್ಕಾಗಿ ಶ್ರೀಮತಿ ಬಿ.ಎಲ್. ಚಂದ್ರಮತಿ ಇವರು ಸಿವಿಲ್ ನ್ಯಾಯಾಲಯ (ಹಿರಿಯ ವಿಭಾಗ) ಮಡಿಕೇರಿ ಇಲ್ಲಿ ದಾಖಲಿಸಿದ್ದ ಎಲ್.ಎ.ಸಿ. ಸಂಖ್ಯೆ : 9/86ರ ಪ್ರಕರಣವು ವಜಾಗೊಂಡಿದ್ದರಿಂದ, ಈ ತೀರ್ಪು ಅರ್ಜಿದಾರರ ಪರವಾಗಿ ಆಗಿದ್ದು, ಈ ತೀರ್ಪಿನ ವಿರುದ್ಧ ಎಂಎಫ್‌ಎ ಸಂಖ್ಯೆ : 511/91ರಲ್ಲಿ ಮೇಲ್ಮನವಿ ದಾಖಲಿಸಿರುತ್ತಾರೆ. ಈ ಮೇಲ್ಮನವಿಯಲ್ಲಿ ಮಾನ್ಯ ನ್ಯಾಯಾಲಯವು ರೂ. 28,500/–ಗಳ ಭೂಮೌಲ್ಯವನ್ನು ನಿಗದಿಪಡಿಸಿ ಈ ಮೊತ್ತದ ಮೇಲೆ ಶೇ. 30ರಷ್ಟು ಸೋಲೇಷಿಯಂ ಹಾಗೂ ಶೇ. 12ರಷ್ಟು ಹೆಚ್ಚುವರಿ ಮಾರುಕಟ್ಟೆ ದರವನ್ನು ಅಲ್ಲದೆ, ವಾರ್ಷಿಕ ಶೇ. 9ರಷ್ಟು ಬಡ್ಡಿಯನ್ನು ಜಮೀನನ್ನು ಕಬ್ಜೆ ಪಡೆದ ದಿನಾಂಕದಿಂದ ತದನಂತರ ವಾರ್ಷಿಕ ಶೇ. 15ರಂತೆ ಬಡ್ಡಿಯನ್ನು ಪಾವತಿ ದಿನಾಂಕದವರೆಗೆ ಪಾವತಿಸಲು ತೀರ್ಪು ನೀಡಿದೆ. ಈ ತೀರ್ಪಿನ ಜಾರಿಗಾಗಿ ಅರ್ಜಿದಾರರು ಜಾರಿ ದಾವೆ ಸಂಖ್ಯೆ : 123/95ನ್ನು ದಾಖಲಿಸಿದ್ದು, ಈ ಜಾರಿ ದಾವೆಯಲ್ಲಿ ಮಾನ್ಯ ಸಿವಿಲ್ ನ್ಯಾಯಾಲಯವು ದಿನಾಂಕ : 10–02–10 ರಂದು ನೀಡಿದ ತೀರ್ಪಿನಲ್ಲಿ ಡಿಕ್ರಿದಾರರು ರೂ. 13,48,252–00 ಗಳನ್ನು ವಸೂಲಿ ಮಾಡಿಕೊಳ್ಳಲು ಹಾಗೂ ಇದರೊಂದಿಗೆ ದಿನಾಂಕ : 11–02–10 ರಿಂದ ರೂ. 2,09,219–60ಗಳ ಮೇಲೆ ಶೇ. 15ರಂತೆ ಪಾವತಿ ದಿನಾಂಕದವರೆಗೆ ಬಡ್ಡಿ ಪಡೆಯಲು ಅರ್ಹರಾಗಿದ್ದಾರೆಂದು ತಿಳಿಸಿದೆ. ಈ ಆದೇಶದ ವಿರುದ್ಧ ಮಾನ್ಯ ಉಚ್ಚ ನ್ಯಾಯಾಲಯದಲ್ಲಿ ರಿಟ್ ಅರ್ಜಿ ದಾಖಲಿಸಲು ಮೇಲೆ(2)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಅನುಮೋದನೆ ನೀಡಲಾಗಿದೆ.

ರಿಟ್ ಅರ್ಜಿ ಸಂಖ್ಯೆ : 11671/10ನ್ನು ಮಡಿಕೇರಿ ಉಪ ವಿಭಾಗಾಧಿಕಾರಿ ಹಾಗೂ ಭೂಸ್ವಾಧೀನಾಧಿಕಾರಿ, ಮಡಿಕೇರಿ ಇವರು ದಾಖಲಿಸಿದ್ದು, ಈ ಪ್ರಕರಣದಲ್ಲಿ ಮಾನ್ಯ ಉಚ್ಚ ನ್ಯಾಯಾಲಯವು ರೂ. 1,52,903–00ಗಳನ್ನು ಠೇವಣಿ ಮಾಡುವ ಷರತ್ತಿಗೊಳಪಟ್ಟು ದಿನಾಂಕ : 10–02–10ರ ಸಿವಿಲ್‌ನ್ಯಾಯಾಲಯದ ಜಾರಿ ದಾವೆ ಸಂಖ್ಯೆ : 123/95ಕ್ಕೆ ದಿನಾಂಕ : 09–04–10ರಂದು ತಡೆಯಾಜ್ಞೆ ನೀಡಿದೆ. ಅದರಂತೆ ಉಚ್ಚ ನ್ಯಾಯಾಲಯದ ಸರ್ಕಾರಿ ವಕೀಲರು ಮೇಲೆ (3)ರಲ್ಲಿ ಓದಲಾದ ದಿನಾಂಕ : 09–04–10ರ ಫ್ಯಾಕ್ಸ್ ಸಂದೇಶದಲ್ಲಿ ರೂ. 1,52,903–00ಗಳನ್ನು ನ್ಯಾಯಾಲಯದಲ್ಲಿ ಠೇವಣಿ ಮಾಡುವಂತೆ ಕೋರಿರುತ್ತಾರೆ.

ಈ ಹಿನ್ನೆಲೆಯಲಿ ಮೇಲೆ (4)ರಲ್ಲಿ ಓದಲಾದ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ಇವರು ರಾಜ್ಯ ಉಚ್ಚ ನ್ಯಾಯಾಲಯದ ಮಧ್ಯಂತರ ತೀರ್ಪಿನ ಪ್ರಕಾರ ನ್ಯಾಯಾಲಯದಲ್ಲಿ ಠೇವಣಿ ಇಡುವ ಸಲುವಾಗಿ ರೂ. 1,52,903–00 ಬಿಡುಗಡೆ ಮಾಡುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸನೀಇ 115 ಭೂಸ್ವಾಪ್ರ 2000, ಬೆಂಗಳೂರು, ದಿನಾಂಕ : 25–05–2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಕೊಡಗು ಜಿಲ್ಲೆ, ಸೋಮವಾರಪೇಟೆ ತಾಲ್ಲೂಕು, ಗುಡಗಳಲೆ ಗ್ರಾಮದಲ್ಲಿ ಶಾಂತವೇರಿ ಪಿಕಪ್ ಕಾಲುವೆ ನಿರ್ಮಿಸಲು ಹಾಗೂ ಹರೇ ಹೊಸೂರು ರಸ್ತೆ ನಿರ್ಮಿಸಲು ಸ್ವಾಧೀನಪಡಿಸಿಕೊಳ್ಳಲಾದ ಹುಲ್ಸೆ ಗ್ರಾಮದ ಪ್ರಸ್ತಾಪಿತ ಜಮೀನುಗಳಿಗೆ ಹೆಚ್ಚುವರಿ ಪರಿಹಾರ ಧನದ ವಿಷಯದಲ್ಲಿ ಉಚ್ಚ ನ್ಯಾಯಾಲಯವು ರಿಟ್ ಅರ್ಜಿ ಸಂಖ್ಯೆ : 11671/10ರಲ್ಲಿ ದಿನಾಂಕ : 09–04–10ರಂದು ನೀಡಿದ ಮಧ್ಯಂತರ ತೀರ್ಪಿನಂತೆ ರೂ. 1,52,903–00ಗಳನ್ನು (ಒಂದು ಲಕ್ಷದ ಐವತ್ತೆರಡು ಸಾವಿರದ ಒಂಭೈನೂರ ಮೂರು ರೂ.ಗಳು ಮಾತ್ರ) ಮಡಿಕೇರಿ ಸಿವಿಲ್ ನ್ಯಾಯಾಲಯದಲ್ಲಿ ಠೇವಣಿ ಮಾಡುವ ಸಲುವಾಗಿ ಬಿಡುಗಡೆ ಮಾಡಿದೆ.

ಈ ವೆಚ್ಚವನ್ನು 2010–11ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ 4702–00–800–1–00 ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2008, ದಿನಾಂಕ : 16–05–2008ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1380

**ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಜಲಸಂಪನ್ಮೂಲ ಇಲಾಖೆ(ಸಣ್ಣ ನೀರಾವರಿ)

## ಪಶುಸಂಗೋಪನೆ ಮತ್ತು ಮೀನುಗಾರಿಕಾ ಸಚಿವಾಲಯ

**ವಿಷಯ :** ಬೆಳಗಾವಿ ಜಿಲ್ಲೆ ಅಥಣಿ ತಾಲ್ಲೂಕು ಮೋಳೆ ಗ್ರಾಮದಲ್ಲಿನ ಕೃತಕ ಗರ್ಭಧಾರಣಾ ಕೇಂದ್ರವನ್ನು ಉಗಾರ–ಖುರ್ದ ಗ್ರಾಮಕ್ಕೆ ಸ್ಥಳಾಂತರಿಸುವಿಕೆ.

**ಓದಲಾಗಿದೆ :**
1. ಆದೇಶ ಸಂಖ್ಯೆ : ಪಸಂಮೀ 217 ಪಸಸೇ 2007, ದಿನಾಂಕ : 31–08–2007.
2. ಪತ್ರ ಸಂಖ್ಯೆ : ಪಸಂಮೀ 243 ಪಸಸೇ 2007, ದಿನಾಂಕ : 03–09–2007.
3. ಪತ್ರ ಸಂಖ್ಯೆ : ಆಪಸಂ/ಡಿವಿಡಿ–3/ವಿವ–54/2005–06, ದಿನಾಂಕ : 02–05–2008.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿ ಬೆಳಗಾವಿ ಜಿಲ್ಲೆ, ಅಥಣಿ ತಾಲ್ಲೂಕಿನ ಮೋಳೆ ಗ್ರಾಮದಲ್ಲಿ ಹೊಸದಾಗಿ ಪಶುಚಿಕಿತ್ಸಾಲಯ ಪ್ರಾರಂಭಿಸಲು ಮಂಜೂರಾತಿ ನೀಡಲಾಗಿದೆ.

2. ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಪತ್ರದಲ್ಲಿ ಅಥಣಿ ತಾಲ್ಲೂಕು, ಮೋಳೆ ಗ್ರಾಮದಲ್ಲಿ ಒಂದು ಕೃತಕ ಗರ್ಭಧಾರಣಾ ಕೇಂದ್ರವನ್ನು ಪ್ರಾರಂಭಿಸಲು ಹಾಗೂ ಒಂದು ಪಶುವೈದ್ಯಕೀಯ ಪರೀಕ್ಷಕರು, ಒಂದು ಗ್ರೂಪ್–ಡಿ ಹುದ್ದೆಯನ್ನು ದೊಡ್ಡರೋಗ ತಡೆ ಉಕ್ಕಡ ಕಾಗವಾಡ ಸಂಸ್ಥೆಯಿಂದ ಮೋಳೆ ಗ್ರಾಮಕ್ಕೆ ಸ್ಥಳಾಂತರಿಸಲು ಅನುಮತಿ ನೀಡಲಾಗಿದೆ.

3. ಮೇಲೆ ಓದಲಾದ ಕ್ರಮಸಂಖ್ಯೆ (3)ರ ಪತ್ರದಲ್ಲಿ ಆಯುಕ್ತರು, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ, ಬೆಂಗಳೂರು ಇವರು ಬೆಳಗಾವಿ ಜಿಲ್ಲೆ, ಅಥಣಿ ತಾಲ್ಲೂಕಿನ ಮೋಳೆ ಗ್ರಾಮಕ್ಕೆ ಒಂದು ಪಶುಚಿಕಿತ್ಸಾಲಯ ಹಾಗೂ ಕೃತಕ ಗರ್ಭಧಾರಣಾ ಕೇಂದ್ರ ಮಂಜೂರಾಗಿರುವುದರಿಂದ, ಮೋಳೆ ಗ್ರಾಮದಲ್ಲಿ ಕೃತಕ ಗರ್ಭಧಾರಣಾ ಕೇಂದ್ರ ಪ್ರಾರಂಭಿಸಲು ನೀಡಿರುವ ಅನುಮತಿಗೆ ತಿದ್ದುಪಡಿ ಮಾಡಿ ಬೈಲಹೊಂಗಲ ತಾಲ್ಲೂಕಿನ ತಿಗಡಿ ಗ್ರಾಮಕ್ಕೆ ಕೃತಕ ಗರ್ಭಧಾರಣಾ ಕೇಂದ್ರ ಪ್ರಾರಂಭಿಸಲು ಅನುಮತಿ ನೀಡುವಂತೆ ಕೋರಿರುತ್ತಾರೆ.

4. ಆಯುಕ್ತರ ಪ್ರಸ್ತಾವನೆಯನ್ನು ಪರಿಶೀಲಿಸಲಾಯಿತು. ಬೆಳಗಾವಿ ಜಿಲ್ಲೆ, ಅಥಣಿ ತಾಲ್ಲೂಕಿನ ಮೋಳೆ ಗ್ರಾಮದಲ್ಲಿ ಈಗಾಗಲೇ ಒಂದು ಪಶುಚಿಕಿತ್ಸಾಲಯ ಕಾರ್ಯನಿರ್ವಹಿಸುತ್ತಿದ್ದು ಅದೇ ಸ್ಥಳದಲ್ಲಿ ಕೃತಕ ಗರ್ಭಧಾರಣಾ ಕೇಂದ್ರ ಸಹ ಮಂಜೂರಾಗಿರುವುದರಿಂದ ಮೋಳೆ ಗ್ರಾಮದಲ್ಲಿ ಎರಡು ಪಶುವೈದ್ಯಕೀಯ ಸಂಸ್ಥೆಗಳಿರುತ್ತದೆ. Standard Pattern Norms ಪ್ರಕಾರ ಒಂದು ಗ್ರಾಮಕ್ಕೆ ಒಂದು ಪಶುವೈದ್ಯ ಸಂಸ್ಥೆ ಇರಬೇಕಾಗಿರುತ್ತದೆ. ಮೋಳೆ ಗ್ರಾಮದಲ್ಲಿ ಎರಡು ಪಶುವೈದ್ಯಕೀಯ ಸಂಸ್ಥೆಗಳಿರುವುದರಿಂದ ಒಂದು ಹೆಚ್ಚುವರಿಯಾಗಿರುತ್ತದೆ. ಆದ್ದರಿಂದ, ಹೆಚ್ಚುವರಿಯಾಗಿ ಅಸ್ತಿತ್ವದಲ್ಲಿರುವ ಕೃತಕ ಗರ್ಭಧಾರಣಾ ಕೇಂದ್ರವನ್ನು ಅವಶ್ಯವಿರುವ ಗ್ರಾಮಕ್ಕೆ ಸ್ಥಳಾಂತರಿಸಲು ಸರ್ಕಾರ ಉದ್ದೇಶಿಸಿದೆ. ಅಥಣಿ ತಾಲ್ಲೂಕಿನ ಉಗಾರ–ಖುರ್ದ ಗ್ರಾಮಕ್ಕೆ ಪಶುವೈದ್ಯಕೀಯ ಸಂಸ್ಥೆಯನ್ನು ಸ್ಥಳಾಂತರಿಸಿದಲ್ಲಿ ಅಲ್ಲಿನ ರೈತಾಪಿ ವರ್ಗಕ್ಕೆ ಪಶುವೈದ್ಯಕೀಯ ಸೌಲಭ್ಯವನ್ನು ನೀಡುವ ಜೊತೆಗೆ ಜಾನುವಾರುಗಳ ಚಿಕಿತ್ಸೆಗೂ ಸಹ ಅನುಕೂಲವಾಗುತ್ತದೆ ಹಾಗೂ ಕೃಷಿ, ಪಶುಸಂಗೋಪನೆ ಕಾರ್ಯಚಟುವಟಿಕೆಗಳ ಅಭಿವೃದ್ಧಿಗೆ ಉತ್ತೇಜನೆ ನೀಡಿದಂತಾಗುತ್ತದೆ. ಹೆಚ್ಚುವರಿಯಾದ ಕೃತಕ ಗರ್ಭಧಾರಣಾ ಕೇಂದ್ರವನ್ನು ಉಗಾರ–ಖುರ್ದ ಗ್ರಾಮಕ್ಕೆ ಸ್ಥಳಾಂತರಿಸಲು ಸ್ಥಳೀಯ ಶಾಸಕರೂ ಸಹ ಶಿಫಾರಸ್ಸು ಮಾಡಿರುತ್ತಾರೆ. ಈ ಎಲ್ಲಾ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿದ ಸರ್ಕಾರ, ಬೆಳಗಾವಿ ಜಿಲ್ಲೆ ಅಥಣಿ ತಾಲ್ಲೂಕಿನ ಮೋಳೆ ಗ್ರಾಮದಲ್ಲಿನ ಕೃತಕ ಗರ್ಭಧಾರಣಾ ಕೇಂದ್ರವನ್ನು ಅದೇ ತಾಲ್ಲೂಕಿನ ಉಗಾರ–ಖುರ್ದ ಗ್ರಾಮಕ್ಕೆ ಹುದ್ದೆ ಸಮೇತ ಸ್ಥಳಾಂತರಿಸಲು ತೀರ್ಮಾನಿಸಿದೆ. ಆದ್ದರಿಂದ, ಈ ಆದೇಶ.

**ಆದೇಶ ಸಂಖ್ಯೆ.: ಪಸಂಮೀ 143 ಪಸಸೇ 2008, ಬೆಂಗಳೂರು, ದಿನಾಂಕ : 19–05–2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ, ಬೆಳಗಾವಿ ಜಿಲ್ಲೆ, ಅಥಣಿ ತಾಲ್ಲೂಕಿನ ಮೋಳೆ ಗ್ರಾಮದಲ್ಲಿನ ಕೃತಕ ಗರ್ಭಧಾರಣಾ ಕೇಂದ್ರವನ್ನು ಒಂದು ಪಶುವೈದ್ಯಕೀಯ ಪರೀಕ್ಷಕರು ಹಾಗೂ ಒಂದು ಗ್ರೂಪ್–ಡಿ ಹುದ್ದೆಯೊಂದಿಗೆ ಅದೇ ತಾಲ್ಲೂಕಿನ ಉಗಾರ–ಖುರ್ದ ಗ್ರಾಮಕ್ಕೆ ಸ್ಥಳಾಂತರಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1381

**ಎಂ.ಪಿ. ನಾಗರಾಜ**

ಪೀಠಾಧಿಕಾರಿ–2

ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ

(ಪಶುಸಂಗೋಪನೆ–ಎ)

**ಪಶುಸಂಗೋಪನೆ ಮತ್ತು ಮೀನುಗಾರಿಕಾ ಸಚಿವಾಲಯ**

**ವಿಷಯ :** ಹಾಸನ ಜಿಲ್ಲೆಯ ಮೀನುಗಾರಿಕೆ ಇಲಾಖೆ ಅಡಿಯಲ್ಲಿ ನಡೆದಿದೆ ಎನ್ನಲಾದ ಅವ್ಯವಹಾರಗಳ ಬಗ್ಗೆ – ಲೋಕಾಯುಕ್ತ ತನಿಖೆ.

**ಓದಲಾಗಿದೆ :** ಪತ್ರ ಸಂಖ್ಯೆ : ಎಡಿಎಂ(1)/13/2009–10 ದಿನಾಂಕ : 28–04–2010

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ಮೀನುಗಾರಿಕೆ ನಿರ್ದೇಶಕರು, ಬೆಂಗಳೂರುರವರು ಹಾಸನ ಜಿಲ್ಲೆಯಲ್ಲಿ ಮೀನುಗಾರಿಕೆ ಅಧಿಕಾರಿಗಳಿಂದ ಮೀನು ಕೊಳ ನಿರ್ಮಾಣಕ್ಕಾಗಿ ಸಹಾಯಧನ ನೀಡುವಲ್ಲಿ ಅವ್ಯವಹಾರ ನಡೆದಿದೆ ಎಂಬ ವಿಷಯದ ಬಗ್ಗೆ ದಿನಾಂಕ : 15–03–2010ರ ಪ್ರಜಾವಾಣಿ ದಿನಪತ್ರಿಕೆಯಲ್ಲಿ ಪ್ರಕಟವಾದ ಪ್ರಕಟಣೆಯ ಬಗ್ಗೆ ಮೀನುಗಾರಿಕೆ ಉಪ ನಿರ್ದೇಶಕರು, ಮೈಸೂರು ರವರಿಂದ ತನಿಖೆ ನಡೆಸಲಾಗಿದೆ ಎಂದು ತಿಳಿಸಿರುತ್ತಾರೆ, ಮುಂದುವರೆದು, ಸದರಿ ಪ್ರಾಥಮಿಕ ತನಿಖಾ ವರದಿಯಲ್ಲಿ ಹೆಚ್ಚಿನ ಮೀನು ಕೃಷಿ ಕೊಳಗಳನ್ನು ನಿರ್ಮಿಸಬಹುದಾದ ನಿವೇಶನ/ಜಾಗ ಸಮರ್ಪಕವಾಗದಿರುವುದು, ಕೊಳಗಳನ್ನು ನಿರ್ಮಿಸಿದರೂ ಸೂಕ್ತ ನೀರಿನ ವ್ಯವಸ್ಥೆ ಇರದಿರುವುದು ಮತ್ತು ಕೆಲವು ಕೊಳಗಳ ನಿರ್ಮಾಣ ಮತ್ತು ನೀಡಲಾದ ಸಹಾಯಧನದಲ್ಲಿ ವ್ಯತ್ಯಾಸವಾಗಿರುವುದು ಹಾಗೂ ಕೆಲವು ಕೊಳಗಳಿಗೆ ಭೇಟಿ ನೀಡಲಾಗದಂತಹ ಪ್ರದೇಶಗಳಲ್ಲಿ ಮೀನು ಕೃಷಿ ಕೊಳಗಳ ನಿರ್ಮಾಣ ಕೈಗೊಂಡಿರುವುದನ್ನು ನೋಡಿದರೆ ಯೋಜನೆಯ ಅನುಷ್ಠಾನದಲ್ಲಿ ಹಲವಾರು ಲೋಪದೋಷಗಳಾಗಿರುವುದು ಗೋಚರಿಸುತ್ತದೆಂದು ವರದಿ ಮಾಡುತ್ತಾ, ಈ ಲೋಪದೋಷಗಳ ಸತ್ಯಾಸತ್ಯತೆಯನ್ನು ತಿಳಿದುಕೊಳ್ಳಲು ವಿಚಾರಣೆ ನಡೆಸುವುದು ಅವಶ್ಯವಾಗಿದೆ ಎಂದು ಸರ್ಕಾರವನ್ನು ಕೋರಿರುತ್ತಾರೆ.

ಈ ಕುರಿತು ಹೆಚ್ಚಿನ ವಿಚಾರಣೆ ನಡೆಸಲು 1984ರ ಕರ್ನಾಟಕ ಲೋಕಾಯುಕ್ತ ಅಧಿನಿಯಮ ಪ್ರಕರಣ 7(2ಎ) ಅಡಿಯಲ್ಲಿ ಮಾನ್ಯ ಲೋಕಾಯುಕ್ತರಿಗೆ ವಹಿಸಲು ಸರ್ಕಾರ ತೀರ್ಮಾನಿಸಿದೆ. ಆದ್ದರಿಂದ, ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಆದೇಶ ಸಂಖ್ಯೆ.: ಪಸಂಮೀ 75 ಮೀಇಸೇ 2010, ಬೆಂಗಳೂರು, ದಿನಾಂಕ : 20–05–2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಹಾಸನ ಜಿಲ್ಲೆಯಲ್ಲಿ ಮೀನು ಕೊಳ ನಿರ್ಮಾಣಕ್ಕಾಗಿ ಸಹಾಯಧನ ನೀಡುವಲ್ಲಿ ಸರ್ಕಾರದ ನೀತಿ ನಿಯಮಗಳನ್ನು ಸರಿಯಾಗಿ ಪಾಲಿಸದೆ ಅವ್ಯವಹಾರ ನಡೆದಿರುವ ಬಗ್ಗೆ ವಿವರವಾದ ವಿಚಾರಣೆ ನಡೆಸಲು ಕರ್ನಾಟಕ ಲೋಕಾಯುಕ್ತ ಅಧಿನಿಯಮ 1984ರ ಪ್ರಕರಣ 7(2ಎ) ಅಡಿಯಲ್ಲಿ ಮಾನ್ಯ ಲೋಕಾಯುಕ್ತರಿಗೆ ವಹಿಸಲಾಗಿದೆ.

ಸದರಿ ವಿಚಾರಣೆಗೆ ಸಂಬಂಧಿಸಿದಂತೆ ಪರಿಶೀಲನಾ ಅಂಶಗಳು ಈ ಕೆಳಕಂಡಂತೆ ಇರುತ್ತವೆ.

I. ರೈತರು ಮತ್ತು ಕೃಷಿ ಕಾರ್ಮಿಕರ ಆತ್ಮಹತ್ಯೆ ತಡೆಗಾಗಿ ಕೇಂದ್ರ ಸರ್ಕಾರದ ವಿಶೇಷ ಪ್ಯಾಕೇಜ್ ಅಡಿಯಲ್ಲಿ ಮಂಜೂರಾದ ಅನುದಾನದಲ್ಲಿ ಮೀನು ಕೃಷಿ ಕೊಳಕ್ಕೆ ನೀಡಲಾದ ಸಹಾಯಧನದಲ್ಲಿ ಈ ಕೆಳಕಂಡ ಅವ್ಯವಹಾರಗಳು ನಡೆದಿರುವ ಕುರಿತು.

(ಅ)ಮೀನು ಕೃಷಿ ಅಭಿವೃದ್ಧಿ ಪ್ರಾಧಿಕಾರ (ಎಫ್‌ಎಫ್‌ಡಿಎ) ಯೋಜನೆಯಡಿ ಪ್ರತ್ಯೇಕ ಅನುದಾನ ನೀಡುತ್ತಿದ್ದು, ಅದರಡಿಯಲ್ಲಿ ಕೃಷಿ ಹೊಂಡ ನಿರ್ಮಿಸದೇ ಸುಮಾರು ರೂ. 1.06 ಕೋಟಿ ವೆಚ್ಚ ತೋರಿಸಿರುವ ಬಗ್ಗೆ.

(ಆ)ಆತ್ಮಹತ್ಯೆ ತಡೆಗಾಗಿ ವಿದರ್ಭ ಪ್ಯಾಕೇಜಿನಲ್ಲಿ ರೂ. 72.00 ಲಕ್ಷ ಅನುದಾನವನ್ನು ದುರ್ಬಳಕೆ ಮಾಡಿರುವ ಬಗ್ಗೆ.

II. ಮೀನುಗಾರಿಕೆ ಇಲಾಖೆಯಿಂದ ಮೀನು ಕೃಷಿಗಾಗಿ ಕೇಂದ್ರ/ರಾಜ್ಯ ಸರ್ಕಾರಗಳಿಂದ ವಿಶೇಷ ಅನುದಾನ ನೀಡಲಾಗುತ್ತಿದ್ದು, ಒಳನಾಡು ಮೀನು ಕೃಷಿಯಲ್ಲಿ ರೈತರನ್ನು ತೊಡಗಿಸಿ ಆರ್ಥಿಕ ಅಭಿವೃದ್ಧಿಗೆ ನೆರವಾಗಬೇಕೆನ್ನುವ ಉದ್ದೇಶದಿಂದ ಕೇಂದ್ರ ಸರ್ಕಾರ ವಿಶೇಷ ಪ್ಯಾಕೇಜ್ ಘೋಷಿಸಿರುತ್ತದೆ. ಅದರ ಪ್ರಕಾರ ರೈತರು ತಮ್ಮ ಜಮೀನಿನಲ್ಲಿ ಮೀನು ಕೃಷಿ ಕೈಗೊಳ್ಳಲು ಹೊಂಡ ನಿರ್ಮಾಣಕ್ಕೆ ಸಬ್ಸಿಡಿ ರೂಪದಲ್ಲಿ ಅನುದಾನ ನೀಡುತ್ತಿದ್ದು, ಇದರಡಿ ಕೆಳಕಂಡ ಅವ್ಯವಹಾರ ನಡೆದಿರುವ ಕುರಿತು.

(1) ಅನುದಾನದ ಹಣಕ್ಕಾಗಿ ಮೀನುಗಾರಿಕೆ ಇಲಾಖೆ ಅಧಿಕಾರಿಗಳು ಸುಳ್ಳು ದಾಖಲೆ ಸೃಷ್ಟಿಸಿ 2004 ರಿಂದ 2009ರ ಅವಧಿಯಲ್ಲಿ ಕೊಳ ನಿರ್ಮಾಣದ ಹೆಸರಿನಲ್ಲಿ ಭಾರಿ ಅವ್ಯವಹಾರ ನಡೆಸಿರುವ ಬಗ್ಗೆ.

(2) ಅರಸೀಕೆರೆ ತಾಲ್ಲೂಕಿನಲ್ಲಿ ಕುಡಿಯಲು ನೀರು ಇಲ್ಲದೇ ಜನ ಪರದಾಡುತ್ತಿದ್ದು, ಆದರೆ, ಅಲ್ಲಿಯೇ ಅತೀ ಹೆಚ್ಚು ಮೀನು ಕೃಷಿ ಹೊಂಡಗಳನ್ನು ನಿರ್ಮಿಸಿರುವ ಬಗ್ಗೆ.

(3) ರೈತರು ತಮಗೆ ಇರುವ ಒಂದೆರಡು ಎಕರೆ ಜಮೀನಿನಲ್ಲಿಯೇ ಕೃಷಿ ಹೊಂಡ ನಿರ್ಮಿಸಿದ್ದಾಗಿ ಸುಳ್ಳು ದಾಖಲೆ ನೀಡಿ ಅನುದಾನ ಪಡೆದಿರುವ ಬಗ್ಗೆ ಹಾಗೂ ದಾಖಲೆಗಳಿಲ್ಲದೆ 5.01 ಹೆಕ್ಟೇರ್ ಪ್ರದೇಶದಲ್ಲಿ ನಿರ್ಮಿಸಿದ 21 ಕೊಳಗಳಿಗೆ ಅನುದಾನ ಚೆಕ್ ನೀಡಿರುವುದು. ಈ ಚೆಕ್‌ಗಳು ವಾಪಸ್ಸಾಗಿದ್ದು, ತದನಂತರ ಅದೇ ಫಲಾನುಭವಿಗಳಿಗೆ ಒಳ ಒಪ್ಪಂದ ಮಾಡಿಕೊಂಡು ಒಂದೇ ದಿನ (ಮಾರ್ಚ್–9ರಂದು) ಒಟ್ಟು ರೂ. 3,57,407–00ಗಳ ಚೆಕ್ ವಿತರಿಸಿರುವ ಬಗ್ಗೆ.

(4) ಮೀನು ಕೃಷಿ ಕೊಳ ನಿರ್ಮಾಣಕ್ಕಾಗಿ ಬೇಲೂರು ತಾಲ್ಲೂಕಿನ ಹಿರಿಗರ್ಜೆ (109/1 & 109/2) ಗ್ರಾಮದ ಒಂದೇ ಕಡೆ ಎರಡು ಕೆರೆಗಳಿಗೆ ಅನುಮತಿ ನೀಡಿರುವ ಬಗ್ಗೆ.

(5) ಅರಸೀಕೆರೆ ತಾಲ್ಲೂಕಿನ ನಾಗವೇದಿ ಗ್ರಾಮದಲ್ಲಿ 3 ಕೊಳಗಳಿಗೆ ಸಹಾಯಧನ ವಿತರಿಸಿರುವ ಬಗ್ಗೆ.

(6) ಅರಸೀಕೆರೆ ತಾಲ್ಲೂಕಿನ ಜನ್ನಾವರ, ಮಾಡಾಳು, ಮುದ್ದರಹಳ್ಳಿ, ದೊಡ್ಡಘಟ್ಟ, ಗಂಡಸಿ, ಬೊಮ್ಮೇನಹಳ್ಳಿ ಗ್ರಾಮಗಳಲ್ಲಿ ಕೊಳ ನಿರ್ಮಿಸದೇ ಸಹಾಯಧನ ನೀಡಿರುವ ಬಗ್ಗೆ.

(7) ಸಕಲೇಶಪುರದಲ್ಲಿ ಕೃಷಿಗೆ ಜಮೀನು ಇಲ್ಲದಿದ್ದರೂ ಮೀನು ಕೃಷಿಗೆ ಹೊಂಡ ನಿರ್ಮಿಸಿದ್ದಾಗಿ ಹಳೆ ಸರ್ಕಾರಿ ಕೆರೆಗಳನ್ನೇ ಸ್ವಂತದ ಕೆರೆಗಳೆಂದು ದಾಖಲೆ ತೋರಿಸಿ ಲಕ್ಷಗಟ್ಟಲೆ ಸಹಾಯಧನ ಪಡೆದಿರುವ ಬಗ್ಗೆ.

(8) ರೆಸಾರ್ಟ್, ಹೋಟೆಲ್ ಹಾಗೂ ಹಳೆಯ ಕೆರೆಗಳಿಗೂ ಹೊಸ ಮೀನು ಕೊಳಗಳೆಂದು ದಾಖಲಿಸಿರುವ ಬಗ್ಗೆ.

ಈ ಪ್ರಕರಣದ ಬಗ್ಗೆ ವಿಚಾರಣೆ ನಡೆಸಿ ಶೀಘ್ರದಲ್ಲಿ ಸರ್ಕಾರಕ್ಕೆ ವರದಿಯನ್ನು ಸಲ್ಲಿಸುವುದು.

ಈ ಪ್ರಕರಣಕ್ಕೆ ಅಗತ್ಯವಿರುವ ಮೂಲ ಕಡತಗಳು/ದಾಖಲಾತಿಗಳನ್ನು ಮೀನುಗಾರಿಕೆ ನಿರ್ದೇಶಕರು, ಬೆಂಗಳೂರು ಇವರು ಮಾನ್ಯ ಲೋಕಾಯುಕ್ತರಿಗೆ ನೀಡುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1382

**ಡಿ.ಎಂ.ರಾಜಣ್ಣ**
ಸರ್ಕಾರದ ಅಧೀನ ಕಾರ್ಯದರ್ಶಿ
ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ(ಮೀ)

## ಸಹಕಾರ ಸಚಿವಾಲಯ

**ವಿಷಯ** : ದಿ ಸಹಸ್ರಾರ್ಜುನ ಸೇವಾ ಕಲ್ಯಾಣ ಸಹಕಾರ ಬ್ಯಾಂಕ್ ನಿ., ಹುಬ್ಬಳ್ಳಿ ಇದರ 2008-09ನೇ ಸಾಲಿನ ವಾರ್ಷಿಕ ಮಹಾ ಸಭೆಯನ್ನು ಮುಂದೂಡುವ ಬಗ್ಗೆ.

**ಓದಲಾಗಿದೆ** : ಸಹಕಾರ ಸಂಘಗಳ ಜಂಟಿ ನಿಬಂಧಕರು (ಪಟ್ಟಣ ಬ್ಯಾಂಕುಗಳ ವಿಭಾಗ), ಕೇಂದ್ರ ಕಛೇರಿ, ಬೆಂಗಳೂರು ಇವರ ಪತ್ರ ಸಂಖ್ಯೆ : ಯುಬಿಸಿ-5/ಜಿಬಿಎಂ/307/2009-10, ದಿನಾಂಕ 09-03-2010.

**ಪ್ರಸ್ತಾವನೆ :**

ದಿ ಸಹಸ್ರಾರ್ಜುನ ಸೇವಾ ಕಲ್ಯಾಣ ಸಹಕಾರ ಬ್ಯಾಂಕ್ ನಿ., ಹುಬ್ಬಳ್ಳಿ ಈ ಬ್ಯಾಂಕಿನ 2008-09ನೇ ಸಾಲಿನ ವಾರ್ಷಿಕ ಮಹಾಸಭೆಯನ್ನು ನಡೆಸಲು ದಿನಾಂಕ 31-03-2010ರ ವರೆಗೆ ಅವಧಿಯನ್ನು ವಿಸ್ತರಿಸಿ ಅನುಮತಿಯನ್ನು ನೀಡಿದ್ದು, ಸದರಿ ಬ್ಯಾಂಕಿನ ವಾರ್ಷಿಕ ಮಹಾಸಭೆಯನ್ನು ನಡೆಸಲು ಸಿಬ್ಬಂದಿ ಕೊರತೆಯಿಂದ ಹಾಗೂ 2009-10ನೇ ಸಾಲಿನ ವಾರ್ಷಿಕ ಮಹಾಸಭೆಯನ್ನು ನಿಕಟವಾಗಿದ್ದು ಎರಡು ಬಾರಿ ಸಭೆಗಳನ್ನು ನಡೆಸಲು ಬ್ಯಾಂಕಿಗೆ ಆರ್ಥಿಕ ವೆಚ್ಚವಾಗುವುದೆಂದು ಸದರಿ ಬ್ಯಾಂಕಿನ 2008-09ನೇ ಸಾಲಿನ ವಾರ್ಷಿಕ ಮಹಾಸಭೆಯನ್ನು 2010ರ ಸೆಪ್ಟೆಂಬರ್‌ನಲ್ಲಿ ನಡೆಸಲು ಸದರಿ ಬ್ಯಾಂಕಿನ ಆಡಳಿತಗಾರರು ಅನುಮತಿಯನ್ನು ಕೋರಿದ್ದು ಮೇಲೆ ಓದಲಾದ ಪತ್ರದಲ್ಲಿ ಸಹಕಾರ ಸಂಘಗಳ ನಿಬಂಧಕರು ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಒ 81 ಸಿಎಲ್ಎಂ 2010, ಬೆಂಗಳೂರು, ದಿನಾಂಕ: 13ನೇ ಮೇ, 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 121ರಡಿಯಲ್ಲಿ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಸರ್ಕಾರವು ದಿ ಸಹಸ್ರಾರ್ಜುನ ಸೇವಾ ಕಲ್ಯಾಣ ಸಹಕಾರ ಬ್ಯಾಂಕ್ ನಿ., ಹುಬ್ಬಳ್ಳಿ ಇದರ 2008-09ನೇ ಸಾಲಿನ ವಾರ್ಷಿಕ ಮಹಾಸಭೆಯನ್ನು ನಡೆಸಲು ದಿನಾಂಕ 30-09-2010ರವರೆಗೆ ಕಾಲಾವಕಾಶ ನೀಡಲು ಅನುವಾಗುವಂತೆ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 27(1)ರ ಉಪಬಂಧಗಳು ಕೆಳಗಿನ ಮಾರ್ಪಾಟಿನೊಂದಿಗೆ ಅನ್ವಯವಾಗುತ್ತದೆಂದು ನಿರ್ದೇಶಿಸುತ್ತದೆ ಎಂದರೆ.

**27ರ ಪ್ರಕರಣದಲ್ಲಿ :**

27ನೇ ಪ್ರಕರಣ ಉಪಪ್ರಕರಣ (1)ರ ಪರಂತುಕದಲ್ಲಿನ **"ಆರು ತಿಂಗಳು"** ಎಂಬ ಪದಗಳಿಗೆ ಬದಲಾಗಿ **"ಹನ್ನೆರಡು ತಿಂಗಳು"** ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**ಸೂಚನೆ :**

ಪ್ರಕರಣ 27 (1)ಕ್ಕೆ ಮಾಡಿದ ಈ ಮಾರ್ಪಾಡು ದಿನಾಂಕ 30-09-2010ರವರೆಗೆ ಜಾರಿಯಲ್ಲಿರತಕ್ಕದ್ದು. ಈ ಅವಧಿ ಮುಗಿದ ನಂತರ ಈ ಆದೇಶದ ಮಾರ್ಪಾಡಿಗೆ ಮೊದಲು ಜಾರಿಯಲ್ಲಿದ್ದಂತೆ ಸದರಿ ಪ್ರಕರಣ 27(1)ರ ಉಪಬಂಧಗಳು ಪುನಃ ಜಾರಿಗೆ ಬರತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**(ಆರ್. ಎಸ್. ನೂಲಿ)**
ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಜಂಟಿ ಕಾರ್ಯದರ್ಶಿ
ಸಹಕಾರ ಇಲಾಖೆ

ಪಿ.ಆರ್. 1383

## URBAN DEVELOPMENT SECRETARIAT

**Sub :-** Entrustment of Audit of City Corporations and Urban Local Bodies of the State to the Comptroller and Auditor General of India.

**Read :-** 1) G.O. No. UDD 98 AHD 2004 dated : 30-05-2005
2) U. O. Note LAW 834 OPN 2005 dated : 02-12-2006
3) D. O. No. Pr. AG(C&CA) DAG (LBA&A)/GP/2009-10/86 dated 24-09-2009

**Preamble:**

The Eleventh Finance Commission recommended grants for the local bodies with a view to augment the Consolidated Fund of the State to supplement the resources of Panchayat Raj Institutions and Urban Local Bodies. Consequent to this, the Ministry of Finance, Department of Expenditure, Government of India issued guidelines for the utilization of Local Bodies grants, According to these guidelines, the Comptroller & Auditor General of India (C&AG) is to be responsible for exercising control and supervision over proper maintenance of Accounts and their Audit for all the tiers of PRIs & ULBs.The C&AG therefore requested for issue of orders for entrustment of technical guidance and supervision of audit arrangement of Local Bodies.

Accordingly, orders for technical collaboration with the C&AG for Audit of Urban Local Bodies in the State were issued in order dated : 30-05-2005 read at (1) above. However, law Department of the State in its opinion rendered on 2$^{nd}$ December 2006 read at (2) above held that entrustment of test check of accounts of Urban Local Bodies on select percentage basis even under Technical Guidance and Supervising model would require amendment to the existing Statutes. The order dated : 30-05-2005 read at (1) above was therefore kept in abeyance until the amendment was issued to the Act.

According to Section 14 (2) of the Comptroller and Auditor general of India's (DPC) Act, 1971, the C&AG with prior approval of the Governor can audit all receipts and expenditure of any body or authority when the grants to such body from the consolidated Fund of India or of the State in a financial year are not less than Rupees one crore. The Pr AG (C&CA) in D.O. letter dated : 24-09-2009 read at (3) above has requested Government to consider entrusting the audit of accounts of all Urban Local Bodies except Notified Area Committees from the year 2008-09 to the C&AG of India under Section 14(2) of C&AG's (DPC) Act, 1971.

Urban Local Bodies are incurring huge expenditure in schemes like Jawaharlal Nehru National Urban Renewal Mission, Mukya Mantri Nagar Uthan Yojana, etc. Even Union Finance Commissions and State Finance Commissions have encouraged greater devolution of funds to ULBs. Such devolution and large scale investment of public funds in schemes of greater public interest calls for establishment and strengthening of accountability and transparency at all levels.

Even though the Controller State Accounts Department is responsible for audit of Urban Local Bodies in the State, in view of huge capital investment and revenue expenditure incurred by these bodies out of grants released by Government of India devolution of funds based on the recommendations of the Union Finance Commission and the State Finance Commission, an oversight by the C&AG will be very useful. The State Government has therefore decided to have a complementary audit of Accounts of Urban Local Bodies including the City Corporations by the C&AG of India. Hence this order.

**Government Order No. UDD 17 SFC 2010, Bangalore, dated : 18-05-2010**

1. The Controller, State Accounts Department shall continue to be the Auditor of accounts of Urban Local Bodies.

2. The complementary audit of accounts of Urban Local Bodies in the State including the City Corporations but excluding the Notified area Committees shall be conducted by the C&AG of India under Section 14(2) of the C&AG's (DPC) Act, 1971.
3. The complementary audit shall be from the financial year 2008-09 and onwards.
4. The periodicity of complementary audit shall be as decided by the C&AG of India.
5. The Auditee Institutions shall be responsible for production of all records/registers required for smooth completion of complementary audit.
6. The Inspection Report shall be forwarded to the Auditee Institution with a copy to the Director of Municipal Administration in respect of Urban Local Bodies except the City Corporations.
7. The Inspection Report of City Corporations shall be forwarded to the concerned City Corporation with a copy to the Secretary, Urban Development Department.
8. The Compliance Reports shall be routed through the Director of Municipal Administration in respect of Urban Local Bodies other than City Corporations and in respect of City Corporations, the Compliance Report shall be through the Secretary, Urban Development Department.
9. The Director of Municipal Administration and the Secretary, Urban Development Department shall be responsible for watching Compliance Report, vetting the Compliance Report and for forwarding the Compliance to complementary Audit.
10. Major/Serious irregularities noticed in complementary Audit and proposed for inclusion in the Audit Report of the C&AG shall be brought to notice of the Director of Municipal Administration, Secretary, Urban Development Department for compliance and Finance Department for information.
11. No. fee for complementary Audit shall be levied by the C&AG of India for audit of Urban Local Bodies including City Corporations.
12. The irregularities pointed out by the C&AG during his complementary audit and not noticed by the State Accounts Department in its audit shall be brought to the notice of the Controller, State accounts department for technical guidance by the Director of Municipal Administration and the Secretary Urban Development Department.
13. The Compliance to audit reports of the Controller, State Accounts Department and the monitoring of Compliance Reports shall continue to be done by the Controller, State Accounts Department.
14. Any difficulty in conducting Audit by the Controller, State Accounts Department or in complementary audit by the C&AG of India shall be reported to the Director of Municipal Administration, Secretary, Urban Development Department and Finance Department for initiating remedial action.
15. Order No. UDD 98 AHD 2004 dated: 30-05-2005 regarding Technical Collaboration for audit of Urban Local Bodies in Karnataka, is withdrawn.

By Order and in the name of the Governor of Karnataka
(**C. R. Ravindra)**
Under Secretary to Government
Urban Development Department

P.R. No. 1384

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ** : ಕನ್ನಡ, ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆಗೆ ಹೆಚ್ಚುವರಿಯಾಗಿ ಒಂದು ಉಪಕಾರ್ಯದರ್ಶಿ ಹುದ್ದೆಯನ್ನು ಸೃಜಿಸುವ ಬಗ್ಗೆ.

**ಓದಲಾಗಿದೆ** : ಕನ್ನಡ ಮತ್ತು ಸಂಸ್ಕೃತಿ ಹಾಗೂ ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ : ಕಸಂವಾ/291/ಕಾ/2010, ದಿನಾಂಕ 17-05-2010.

**ಪ್ರಸ್ತಾವನೆ :**

ಮೇಲೆ ಓದಲಾದ ದಿನಾಂಕ : 17-05-2010ರ ಅನಧಿಕೃತ ಟಿಪ್ಪಣಿಯಲ್ಲಿ ಕನ್ನಡ ಮತ್ತು ಸಂಸ್ಕೃತಿ ಹಾಗೂ ವಾರ್ತಾ ಇಲಾಖೆಗೆ ಉಪ ಕಾರ್ಯದರ್ಶಿ ಹುದ್ದೆಯೊಂದನ್ನು ಸೃಜಿಸಲು ಆರ್ಥಿಕ ಇಲಾಖೆಯು ಸಹಮತಿ ನೀಡಿದೆಯೆಂದು, ಅದರಂತೆ ಒಂದು ಉಪಕಾರ್ಯದರ್ಶಿ ಹುದ್ದೆಯನ್ನು ಸೃಜಿಸಲು ಹಾಗೂ ಸದರಿ ಹುದ್ದೆಗೆ ಒಬ್ಬ ಉಪಕಾರ್ಯದರ್ಶಿಯನ್ನು

ನೇಮಕಾತಿ ಮಾಡಲು ಕನ್ನಡ ಮತ್ತು ಸಂಸ್ಕೃತಿ ಹಾಗೂ ವಾರ್ತಾ ಇಲಾಖೆಯ ಸರ್ಕಾರದ ಕಾರ್ಯದರ್ಶಿಯವರು ಕೋರಿದ್ದಾರೆ. ಇದನ್ನು ಪರಿಶೀಲಿಸಿದ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 445 ಸಆಸೇ 2009, ಬೆಂಗಳೂರು, ದಿನಾಂಕ: 28ನೇ ಮೇ, 2010**

ಕನ್ನಡ ಮತ್ತು ಸಂಸ್ಕೃತಿ ಹಾಗೂ ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆಗೆ (Dealing with Kannada, Culture & Information Subject) ಹೆಚ್ಚುವರಿ ವೇತನ ಶ್ರೇಣಿ ರೂ. 20025–28275ರ ಉಪಕಾರ್ಯದರ್ಶಿ ಹುದ್ದೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸೃಜಿಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯು ದಿನಾಂಕ 12–05–2010ರ ಅನಧಿಕೃತ ಟಿಪ್ಪಣಿ ಸಂಖ್ಯೆ : ಆಇ 366 ವೆಚ್ಚ–12/2010ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**(ಎಚ್. ಆರ್. ನಾಗೇಂದ್ರ)**
ಸರ್ಕಾರದ ಅಧೀನ ಕಾರ್ಯದರ್ಶಿ
ಪಿ.ಆರ್. 1385 ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು–3)

## ಒಳಾಡಳಿತ ಸಚಿವಾಲಯ

**ವಿಷಯ** : ಬಿ.ಇ.ಎಲ್. ಡಾ॥ ಅಂಬೇಡ್ಕರ್ ಸಹಕಾರ ಸಂಘ, ಬೆಂಗಳೂರು ಇದರ ವ್ಯವಹಾರದಲ್ಲಿನ ಮೋಸ, ವಂಚನೆ ಮತ್ತು ಹಣ ದುರುಪಯೋಗದ ಬಗ್ಗೆ ಸಿ.ಐ.ಡಿ. ತನಿಖೆ.

**ಓದಲಾಗಿದೆ** : ಸಹಕಾರ ಇಲಾಖೆಯ ಕಡತ ಸಂ.ಸಿಓ 20 ಸಿಹೆಚ್‌ಎಸ್ 2008

**ಪ್ರಸ್ತಾವನೆ :**

ಮೇಲೆ ಓದಲಾದ ಸಹಕಾರ ಇಲಾಖೆಯ ಕಡತದಲ್ಲಿ ಸಹಕಾರ ಇಲಾಖೆಯು ಬಿ.ಇ.ಎಲ್. ಕಾರ್ಖಾನೆಯ ಡಾ॥ ಅಂಬೇಡ್ಕರ್ ಸಹಕಾರ ಸಂಘದಲ್ಲಿ ಹಿಂದೆ 1995ನೇ ಸಾಲಿನಿಂದ ದಿನಾಂಕ 31–3–2010ರ ವರೆಗೆ ಅಧಿಕಾರದಲ್ಲಿದ್ದ ಆಡಳಿತ ಮಂಡಳಿಯ ಅಧ್ಯಕ್ಷರಾಗಿದ್ದ ಶ್ರೀ ಸಿ. ಲಕ್ಷ್ಮಣನ್, ಉಪಾಧ್ಯಕ್ಷರಾದ ಎಸ್. ಆರ್. ನರಸಿಂಹ ಮೂರ್ತಿ ಮತ್ತು ಸಂಘದ ಪದಾಧಿಕಾರಿಗಳು ಅವರ ಅಧಿಕಾರಾವಧಿಯಲ್ಲಿ ಸಹಕಾರ ಸಂಘಗಳ ಕಾಯಿದೆಯನ್ನು ಉಲ್ಲಂಘನೆ ಮಾಡಿ ಬೆಂಗಳೂರು ನಗರದ ಸುತ್ತಮುತ್ತ ಸಂಘದ ಸದಸ್ಯರಿಗೆ ನಿವೇಶನಗಳನ್ನು ಹಂಚಿಕೆ ಮಾಡುವುದಾಗಿ ಹಣ ಪಡೆದು, ನೂರಾರು ಎಕರೆ ಜಮೀನು ಖರೀದಿಸಿ ಸಂಘಕ್ಕೆ ಮತ್ತು ಸಂಘದ ಸದಸ್ಯರಿಗೆ ವಿಶ್ವಾಸ ದ್ರೋಹ ಹಾಗೂ ಕೋಟ್ಯಾಂತರ ರೂಪಾಯಿ ಮೋಸ ಮಾಡಿದ್ದು ಸದರಿಯವರ ವಿರುದ್ಧ ಸಿ.ಐ.ಡಿ. ತನಿಖೆ ನಡೆಸಬೇಕೆಂದು ಪ್ರಸ್ತಾವನೆಯನ್ನು ಸಲ್ಲಿಸಲಾಗಿದೆ.

ಈ ಪ್ರಕರಣಕ್ಕೆ ಸಂಬಂಧಿಸಿದಂತೆ ಬೆಂಗಳೂರಿನ ಜಾಲಹಳ್ಳಿ ಪೊಲೀಸ್ ಠಾಣೆಯಲ್ಲಿ ಮೊ.ಸಂ. 90/10ನ್ನು ಐಪಿಸಿ ಕಲಂ 406 ಮತ್ತು 420ರನ್ವಯ ದಾಖಲು ಮಾಡಿರುತ್ತಾರೆ.

ಆದುದರಿಂದ ಈ ಆದೇಶ

**ಸರ್ಕಾರಿ ಆದೇಶ ಸಂಖ್ಯೆ: ಒಇ 28 ಸಿಐಡಿ 2010, ಬೆಂಗಳೂರು, ದಿನಾಂಕ: 31ನೇ ಮೇ, 2010**

ಮೇಲೆ ವಿವರಿಸಿದ ಹಿನ್ನೆಲೆಯಲ್ಲಿ ಬಿ.ಇ.ಎಲ್. ಕಾರ್ಖಾನೆಯ ಡಾ॥ ಅಂಬೇಡ್ಕರ್ ಸಹಕಾರ ಸಂಘದಲ್ಲಿ ಹಿಂದೆ 1995ನೇ ಸಾಲಿನಿಂದ ದಿನಾಂಕ 31–3–2010ರ ವರೆಗೆ ಅಧಿಕಾರದಲ್ಲಿದ್ದ ಆಡಳಿತ ಮಂಡಳಿಯ ಅಧ್ಯಕ್ಷರಾಗಿದ್ದ ಶ್ರೀ ಸಿ. ಲಕ್ಷ್ಮಣನ್, ಉಪಾಧ್ಯಕ್ಷರಾದ ಎಸ್. ಆರ್. ನರಸಿಂಹ ಮೂರ್ತಿ ಮತ್ತು ಸಂಘದ ಪದಾಧಿಕಾರಿಗಳು ಅವರ ಅಧಿಕಾರಾವಧಿಯಲ್ಲಿ ಸಹಕಾರ ಸಂಘಗಳ ಕಾಯಿದೆಯನ್ನು ಉಲ್ಲಂಘನೆ ಮಾಡಿ ಬೆಂಗಳೂರು ನಗರದ ಸುತ್ತ ಮುತ್ತ ಸಂಘದ ಸದಸ್ಯರಿಗೆ ನಿವೇಶನಗಳನ್ನು ಹಂಚಿಕೆ ಮಾಡುವುದಾಗಿ ಹಣ ಪಡೆದು, ನೂರಾರು ಎಕರೆ ಜಮೀನು ಖರೀದಿಸಿ ಸಂಘಕ್ಕೆ ಮತ್ತು ಸಂಘದ ಸದಸ್ಯರಿಗೆ ವಿಶ್ವಾಸ ದ್ರೋಹ ಹಾಗೂ ಕೋಟ್ಯಾಂತರ ರೂಪಾಯಿ ಮೋಸ ಮಾಡಿರುವುದಕ್ಕೆ ಸಂಬಂಧಿಸಿದಂತೆ ಬೆಂಗಳೂರಿನ ಜಾಲಹಳ್ಳಿ ಪೊಲೀಸ್ ಠಾಣೆಯಲ್ಲಿ ಐಪಿಸಿ ಕಲಂ 406 ಮತ್ತು 420 ರನ್ವಯ ದಾಖಲಾಗಿರುವ ಮೊ.ಸಂ. 90/10ನ್ನು ಮುಂದಿನ ತನಿಗೆಗಾಗಿ ಸಿ.ಐ.ಡಿ.ಗೆ ವರ್ಗಾಯಿಸಲು ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ.

ಈ ಮೊಕದ್ದಮೆಗೆ ಸಂಬಂಧಿಸಿದ ದಾಖಲೆಗಳನ್ನು ಸಿ.ಐ.ಡಿಗೆ ಹಸ್ತಾಂತರಿಸಲು ಬೆಂಗಳೂರು ನಗರದ ಪೋಲೀಸ್ ಆಯುಕ್ತರು ಅಗತ್ಯ ಕ್ರಮ ತೆಗೆದುಕೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**(ಪಿ. ಶಿವರಾಮ ಭಟ್)**
ಸರ್ಕಾರದ ಅಧೀನ ಕಾರ್ಯದರ್ಶಿ
ಪಿ.ಆರ್. 1386 ಒಳಾಡಳಿತ ಇಲಾಖೆ (ಅಪರಾಧಗಳು)

**ಶಿಕ್ಷಣ ಸಚಿವಾಲಯ**

**ವಿಷಯ** : ಶ್ರೀ ಆರ್. ರಾಮಾಂಜನೇಯಲು, ಹಿರಿಯ ಶ್ರೇಣಿ ಉಪನ್ಯಾಸಕರು, ಸರ್ಕಾರಿ ಮಹಿಳಾ ಪಾಲಿಟೆಕ್ನಿಕ್, ಬೆಂಗಳೂರು ಇವರ ಮೇಲೆ ವಿಧಿಸಲಾಗಿದ್ದ ದಂಡನೆಯ ಮೇಲೆ ಪರಮಾರ್ಶಿತ ಅರ್ಜಿ.

**ಓದಲಾಗಿದೆ** : 1) ಸಂಖ್ಯೆ : ಇಡಿ 80 ಡಿಟಿಇ 2003, ದಿನಾಂಕ 10–5–2004ರ ಸರ್ಕಾರದ ನೋಟೀಸು

2) ಸಂಖ್ಯೆ : ಇಡಿ 80 ಡಿಟಿಇ 2003, ದಿನಾಂಕ 16–12–2006ರ ಸರ್ಕಾರದ ಆದೇಶ

**ಪ್ರಸ್ತಾವನೆ :**

ಶ್ರೀ ಆರ್. ರಾಮಾಂಜನೇಯಲು, ಹಿರಿಯ ಶ್ರೇಣಿ ಉಪನ್ಯಾಸಕರು, ದೂರಸಂಪರ್ಕ ವಿಭಾಗ, ಸರ್ಕಾರಿ ಮಹಿಳಾ ಪಾಲಿಟೆಕ್ನಿಕ್, ಬೆಂಗಳೂರು ಇವರು ಸರ್ಕಾರಿ ಮಹಿಳಾ ಪಾಲಿಟೆಕ್ನಿಕ್, ಬೆಂಗಳೂರು ಇಲ್ಲಿ ಉಪನ್ಯಾಸಕರಾಗಿ ಕರ್ತವ್ಯ ನಿರ್ವಹಿಸುತ್ತಿದ್ದು ಇವರು ದಿನಾಂಕ 3–12–2001 ರಿಂದ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರಾಗಿ ತೀವ್ರ ಸ್ವರೂಪದ ದುರ್ನಡತೆಯನ್ನು ಎಸಗಿದ್ದರು. ಆದುದರಿಂದ ಅವರ ವಿರುದ್ಧ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಯ 11ರ ನಿಯಮದಡಿ ಶಿಸ್ತು ಕ್ರಮವನ್ನು ಕೈಗೊಂಡು ಅವರಿಗೆ ಅನೇಕ ಜ್ಞಾಪನಗಳನ್ನು ನೀಡಲಾಗಿತ್ತು, ಅದರೆ ಅವರು ಅದಕ್ಕೆ ಸ್ಪಂದಿಸಿ ಕರ್ತವ್ಯಕ್ಕೆ ಹಾಜರಾಗಿರಲಿಲ್ಲ. ಆದ್ದರಿಂದ ಅವರ ವಿರುದ್ಧ ತೀವ್ರ ಸ್ವರೂಪದ ದುರ್ನಡತೆಗಾಗಿ ಇಲಾಖಾ ವಿಚಾರಣೆಯನ್ನು ಹೂಡುವುದು ಅಗತ್ಯವಾಗಿತ್ತು.

ಅದರಂತೆ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಯ 11ನೇ ನಿಯಮದಡಿ ಕಾರಣ ಕೇಳುವ ನೋಟೀಸ್‌ನೊಂದಿಗೆ ದೋಷಾರೋಪಣಾ ಪಟ್ಟಿ ಇತ್ಯಾದಿಗಳೊಂದಿಗೆ ಅವರಿಗೆ ಜಾರಿ ಮಾಡಲು ನೊಂದಾಯಿತ ಅಂಚೆ ಮೂಲಕ ಅವರ ಮನೆಯ ವಿಳಾಸಕ್ಕೆ ಕಳುಹಿಸಲಾಗಿತ್ತು. ಅದು ಜಾರಿಯಾಗದೇ ಅಂಚೆ ಪ್ರಾಧಿಕಾರದಿಂದ ಹಿಂತಿರುಗಿತ್ತು. ನಿಯಮಾನುಸಾರ ಕಾರಣ ಕೇಳುವ ನೋಟೀಸ್ ಜಾರಿಯಾಗದ ಕಾರಣ ದಿನಾಂಕ 05–04–2006ರ ಪ್ರಜಾವಾಣಿ ಮತ್ತು ವಿಜಯ ಕರ್ನಾಟಕ ದಿನ ಪತ್ರಿಕೆಗಳಲ್ಲಿ ಸದರಿ ಸೂಚನೆಗಳನ್ನು ಪ್ರಕಟಿಸಲಾಗಿತ್ತು. ಅದಕ್ಕೂ ಸಹ ಅವರು ಪ್ರತಿಕ್ರಯಿಸಲಿರಲಿಲ್ಲ. ಅಪಾದಿತರ ಗೈರು ಹಾಜರಿಯು ನಾಲ್ಕು ವರ್ಷಗಳಿಗೂ ಮೀರಿದ್ದರಿಂದ ಅವರಿಗೆ ಸರ್ಕಾರಿ ಕೆಲಸದಲ್ಲಿ ಆಸಕ್ತಿ ಇಲ್ಲವೆಂದು ಪರಿಭಾವಿಸಿ ಮೇಲ್ಕಂಡ ನಿಯಮಾವಳಿಯ ಉಪಬಂಧಗಳ ಅನುಸಾರ ಸೇವೆಯಿಂದ ವಜಾ ಮಾಡುವ ದಂಡನೆಯನ್ನು ವಿಧಿಸಲು ಸರ್ಕಾರವು ತೀರ್ಮಾನಿಸಿತ್ತು. ಅದರಂತೆ ಮೇಲೆ ಕ್ರಮ ಸಂಖ್ಯೆ 2 ರಲ್ಲಿ ಓದಲಾದ ಆದೇಶದಲ್ಲಿ ಆಪಾದಿತರ ಮೇಲೆ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಯ 8(xiii)ನೇ ನಿಯಮದಡಿ ಸೇವೆಯಿಂದ ವಜಾಮಾಡುವ ದಂಡನೆಯನ್ನು ವಿಧಿಸಿ ಅವರನ್ನು ಸೇವೆಯಿಂದ ವಜಾಗೊಳಿಸಲಾಗಿತ್ತು.

ದಿನಾಂಕ 19–06–2009 ರಂದು ಶ್ರೀ ಆರ್. ರಾಮಾಂಜನೇಯಲು ರವರು ಸರ್ಕಾರಕ್ಕೆ ಮನವಿ ಸಲ್ಲಿಸಿ ನಿವೇದಿಸಿರುವಂತೆ ಆಕಸ್ಮಿಕವಾಗಿ ಘೋರ ಅಪಘಾತಕ್ಕೆ ಒಳಗಾಗಿ ತಲೆಗೆ ಪೆಟ್ಟು ಬಿದ್ದು ಪ್ರಜ್ಞೆ ಕಳೆದುಕೊಂಡು ನಿಮಾನ್ಸ್‌ನಲ್ಲಿ ಹೊರರೋಗಿಯಾಗಿ ದಾಖಲಾಗಿದ್ದು ಆ ಸಂದರ್ಭದಲ್ಲಿ ಅವರ ಕಣ್ಣು ಕಾಣದಂತಾಗಿ ಗಂಟಲಿನ ಸಮಸ್ಯೆಯಿಂದ ಮಾತನಾಡಲು ಧ್ವನಿ ಇಲ್ಲವಾಗಿತ್ತು. ಅದರಿಂದ ಅವರು ಕೆಲಸಕ್ಕೆ ಹಾಜರಾಗಿರಲಿಲ್ಲ. ಈ ಮಧ್ಯೆ ಅವರು ಈ ಕೆಳಕಂಡ ಆಸ್ಪತ್ರೆಗಳಲ್ಲಿ ಚಿಕಿತ್ಸೆ ಪಡೆದಿರುತ್ತಾರೆ.

| ಕ್ರಮ ಸಂಖ್ಯೆ | ಆಸ್ಪತ್ರೆಯ ಹೆಸರು | ಚಿಕಿತ್ಸೆ ಪಡೆದುಕೊಂಡ ಅವಧಿ |
|---|---|---|
| (1) | (2) | (3) |
| 1 | ನಿಮಾನ್ಸ್, ಬೆಂಗಳೂರು | ದಿನಾಂಕ 09–01–2000 ರಿಂದ 25–09–2002 ವರೆಗೆ |
| 2 | ಅಮೃತ ನರ್ಸಿಂಗ್ ಹೋಮ್, ಬಳ್ಳಾರಿ | ದಿನಾಂಕ 20–01–2000 ರಿಂದ ಮೇ 2000 ವರೆಗೆ |
| 3 | ಸೆಂಟ್ ಜಾನ್ಸ್, ಆಸ್ಪತ್ರೆ, ಬೆಂಗಳೂರು | ಮೇ 2000 ರಿಂದ ನವೆಂಬರ್ 2001 ವರೆಗೆ |
| 4 | ಸರ್ಕಾರಿ ಆಸ್ಪತ್ರೆ, ಬಳ್ಳಾರಿ | ದಿನಾಂಕ 08–06–2000 |
| 5 | ಸಿ.ಎಂ.ಸಿ. ಆಸ್ಪತ್ರೆ, ವೇಲೂರು | ದಿನಾಂಕ 02–09–2002 ರಿಂದ 15–01–2005 ವರೆಗೆ |
| 6 | ಕೆ.ಎಂ.ಸಿ. ಆಸ್ಪತ್ರೆ, ಹುಬ್ಬಳ್ಳಿ | ದಿನಾಂಕ 15–01–2005 ರಿಂದ 30–01–2009 ವರೆಗೆ |

ಅವರು ಈಗ ಸಂಪೂರ್ಣ ಗುಣಮುಖರಾಗಿದ್ದು ಕಛೇರಿಯಲ್ಲಿ ಕಾರ್ಯನಿರ್ವಯಿಸಲು ಸಿದ್ಧರಾಗಿರುವುದರಿಂದ ಮತ್ತೆ ಕೆಲಸಕ್ಕೆ ತೆಗೆದುಕೊಳ್ಳುವಂತೆ ಕೋರಿದ್ದಾರೆ.

ಶ್ರೀ ಆರ್. ರಾಮಾಂಜನೇಯಲು ರವರು ಸಲ್ಲಿಸಿರುವ ಸಕಲ ದಾಖಲೆಗಳನ್ನು ಕೂಲಂಕಷವಾಗಿ ಪರಿಶೀಲಿಸಲಾಗಿದೆ. ದಿನಾಂಕ 09–01–2000 ರಿಂದ ನಿರಂತರವಾಗಿ ಚಿಕಿತ್ಸೆ ಪಡೆಯುತ್ತಿರುವುದು ವೈದ್ಯಕೀಯ ಮಂಡಳಿಯು ನೀಡಿರುವ ವರದಿ ಮತ್ತು ದಸ್ತಾವೇಜುಗಳಿಂದ ಸ್ಪಷ್ಟವಾಗಿ ಬಿಂಬಿತವಾಗಿದೆ.

ಆದುದರಿಂದ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಯ 26ನೇ ನಿಯಮಾವಳಿಯಲ್ಲಿ ಈ ಪ್ರಕರಣವನ್ನು ಮೇಲೆ ವಿವರಿಸಿದ ಘಟನಾವಳಿಗಳ ಬೆಳಕಿನಲ್ಲಿ ಪರಾಮರ್ಶಿಸಲಾಗಿದೆ. ಅವರು ಅಪಘಾತಕ್ಕೆ ಗುರಿಯಾಗಿ ಸತತವಾಗಿ ಆಸ್ಪತ್ರೆಗಳಲ್ಲಿ ಚಿಕಿತ್ಸೆ ಪಡೆಯತ್ತಿದ್ದ ಹಿನ್ನೆಲೆಯಲ್ಲಿ ಅವರು ಕರ್ತವ್ಯಕ್ಕೆ ಗೈರುಹಾಜರಾಗಿರುವುದು ಕಂಡುಬರುತ್ತದೆ. ಆದ್ದರಿಂದ ಅವರನ್ನು ಪುನಃ ಕರ್ತವ್ಯಕ್ಕೆ ನೇಮಿಸುವುದು ಸೂಕ್ತವೆಂದು ಸರ್ಕಾರ ನಿರ್ಧರಿಸಿದೆ. ಆದುದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 87 ಡಿಟಿಇ 2009, ಬೆಂಗಳೂರು, ದಿನಾಂಕ: 20ನೇ ಮೇ, 2010**

ಪ್ರಸ್ತಾವನೆಯಲ್ಲಿ ವಿವರಿಸಿದ ಹಿನ್ನೆಲೆಯಲ್ಲಿ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಯ 26(ಎ)ನೇ ನಿಯಮದ ಪ್ರಕಾರ ಸರ್ಕಾರಿ ಮಹಿಳಾ ಪಾಲಿಟೆಕ್ನಿಕ್, ಬೆಂಗಳೂರು ಇಲ್ಲಿ ಹಿರಿಯ ಶ್ರೇಣಿ ಉಪನ್ಯಾಸಕರಾಗಿದ್ದು ಸೇವೆಯಿಂದ ವಜಾಗೊಂಡಿರುವ ಶ್ರೀ ಆರ್. ರಾಮಾಂಜನೇಯಲು ರವರನ್ನು ಸರ್ಕಾರಿ ಸೇವೆಯಲ್ಲಿ ಈ ತಕ್ಷಣದಿಂದ ಜಾರಿಗೆ ಬರುವಂತೆ ಮರು ನೇಮಿಸಲಾಗಿದೆ ಮತ್ತು ಅವರನ್ನು ಸೇವೆಯಿಂದ ವಜಾ ಮಾಡಿದ ಆದೇಶವನ್ನು ರದ್ದುಗೊಳಿಸಲಾಗಿದೆ. ಸೇವೆಯಿಂದ ವಜಾಗೊಂಡ ದಿನಾಂಕದಿಂದ ಸೇವೆಗೆ ಪುನಃ ನೇಮಕಗೊಳ್ಳುವ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ 106(ಎ) ನಿಯಮದ ಪ್ರಕಾರ ವೇತನರಹಿತ ರಜೆ ಎಂದು ವೈದ್ಯಕೀಯ ಆಧಾರದ ಮೇಲೆ ಪರಿಗಣಿಸಲಾಗಿದೆ.

ತಾಂತ್ರಿಕ ಶಿಕ್ಷಣ ನಿರ್ದೇಶಕರು ಶ್ರೀ ಆರ್. ರಾಮಾಂಜನೇಯಲು ರವರನ್ನು ಸೂಕ್ತ ಸ್ಥಾನದಲ್ಲಿ ನೇಮಕ ಮಾಡುವ ಬಗ್ಗೆ ಖಾಲಿ ಹುದ್ದೆಗಳ ವಿವರಗಳೊಂದಿಗೆ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಲು ಆದೇಶಿಸಿದೆ.

. ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಬಿ. ಎಸ್. ನಾಗರಾಜ್)**

ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ)

ಪಿ.ಆರ್. 1387 ಶಿಕ್ಷಣ ಇಲಾಖೆ (ತಾಂತ್ರಿಕ ಶಿಕ್ಷಣ)

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ** : ಕರ್ನಾಟಕ ಆರೋಗ್ಯ ವ್ಯವಸ್ಥೆ ಅಭಿವೃದ್ಧಿ ಮತ್ತು ಸುಧಾರಣಾ ಯೋಜನೆಯ ಮುಖ್ಯ ಹಣಕಾಸು ಅಧಿಕಾರಿಯವರಿಗೆ ಎ.ಸಿ. ಬಿಲ್ ಮೂಲಕ ಖಜಾನೆಯಿಂದ ಹಣ ಸೆಳೆಯಲು ಅಧಿಕಾರ ನೀಡುವ ಬಗ್ಗೆ.

**ಓದಲಾಗಿದೆ** : 1) ಸರ್ಕಾರದ ಆದೇಶ ಸಂ. : ಹೆಚ್ ಎಫ್ ಡಬ್ಲ್ಯೂ/ಕೆಹೆಚ್ಎಸ್‌ಡಿಆರ್‌ಪಿ/ಎಸ್‌ಇಸಿಟಿ–1/2006, ದಿನಾಂಕ 30–12–2006.

2) ಸರ್ಕಾರದ ಆದೇಶ ಸಂ. : ಹೆಚ್ಎಫ್‌ಡಬ್ಲ್ಯೂ/ಕೆಹೆಚ್ಎಸ್‌ಡಿಆರ್‌ಪಿ/ಎಸ್‌ಇಸಿಟಿ–ಜಿಓ 1/2007, ದಿನಾಂಕ 31–07–2008.

3) ಸರ್ಕಾರದ ಆದೇಶ ಸಂ. : ಹೆಚ್ಎಫ್‌ಡಬ್ಲ್ಯೂ/ಕೆಹೆಚ್ಎಸ್‌ಡಿಆರ್‌ಪಿ/ಎಸ್‌ಇಸಿಟಿ/ಜಿಓ–1/2007, ದಿನಾಂಕ 4–9–2008.

4) ಸರ್ಕಾರದ ಆದೇಶ ಸಂ. : ಹೆಚ್ಎಫ್‌ಡಬ್ಲ್ಯೂ/(ಪಿಆರ್) 63 ಡಬ್ಲ್ಯೂಬಿಎ 2009, ಬೆಂಗಳೂರು, ದಿನಾಂಕ : 21–04–2009.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ವಿಶ್ವಬ್ಯಾಂಕ್ ನೆರವಿನ ಕರ್ನಾಟಕ ಆರೋಗ್ಯ ವ್ಯವಸ್ಥೆ ಅಭಿವೃದ್ಧಿ ಮತ್ತು ಸುಧಾರಣಾ ಯೋಜನೆಯನ್ನು ಪ್ರಾರಂಭಿಸಲು ಮಂಜೂರಾತಿ ನೀಡಲಾಗಿದೆ. ಯೋಜನೆ ಕಛೇರಿಯಲ್ಲಿ ತುರ್ತು ಸಂದರ್ಭಗಳಲ್ಲಿ ಕಛೇರಿ ವೆಚ್ಚವನ್ನು ಭರಿಸಲು ಸಾಧ್ಯವಾಗುವಂತೆ ರೂ. 75,000–00 ಗಳು ಅಥವಾ ಕಡಿಮೆ ಹಣವನ್ನು ಎ.ಸಿ. ಬಿಲ್ ಮೂಲಕ ಖಜಾನೆಯಿಂದ ಸೆಳೆಯಲು ಯೋಜನೆಯ ಮುಖ್ಯ ಹಣಕಾಸು ಅಧಿಕಾರಿಯವರಿಗೆ ಮೇಲೆ (2) ರಿಂದ (4) ರಲ್ಲಿ ಓದಲಾದ ಸರ್ಕಾರಿ ಆದೇಶಗಳನ್ವಯ ಕ್ರಮವಾಗಿ 2007–08, 2008–09 ಮತ್ತು 2009–10ನೇ ಸಾಲಿನಲ್ಲಿ ಅಧಿಕಾರ ನೀಡಲಾಗಿತ್ತು. ಸದರಿ ಸೌಲಭ್ಯವನ್ನು 2010–11ನೇ ಸಾಲಿನಲ್ಲಿ ಮುಂದುವರೆಸಲು ಪ್ರಸ್ತಾಪಿಸಲಾಗಿದೆ.

ಆದ್ದರಿಂದ ಕೆಳಕಂಡ ಆದೇಶ

**ಸರ್ಕಾರಿ ಆದೇಶ ಸಂಖ್ಯೆ: ಹೆಚ್ಎಫ್‌ಡಬ್ಲ್ಯೂ (ಪಿಆರ್) 63 ಡಬ್ಲ್ಯೂಬಿಎ 2009, ಬೆಂಗಳೂರು, ದಿನಾಂಕ: 24ನೇ ಮೇ, 2010**

ಪ್ರಸ್ತಾವನೆಯಲ್ಲಿ ವಿವರಿಸಿದ ಹಿನ್ನೆಲೆಯಲ್ಲಿ, ಸರ್ಕಾರವು, ಕರ್ನಾಟಕ ಆರೋಗ್ಯ ವ್ಯವಸ್ಥೆ ಅಭಿವೃದ್ಧಿ ಮತ್ತು ಸುಧಾರಣಾ ಯೋಜನೆಯ ಕಾರ್ಯಚಟುವಟಿಕೆಗಳ ಸಂಬಂಧ ತುರ್ತು ಸಂದರ್ಭಗಳಲ್ಲಿ ವೆಚ್ಚವನ್ನು ಭರಿಸುವ ಸಲುವಾಗಿ 2010–11ನೇ ಸಾಲಿನಲ್ಲಿ ರೂ. 75,000–00 (ಎಪ್ಪತ್ತೈದು ಸಾವಿರ ರೂಪಾಯಿಗಳು ಮಾತ್ರ) ಅಥವಾ ಕಡಿಮೆ ಹಣವನ್ನು ಎ.ಸಿ. ಬಿಲ್ ಮೂಲಕ ಲೆಕ್ಕ ಶೀರ್ಷಿಕೆ "2210–06–800–0–84–051 (ಸಾಮಾನ್ಯ ವೆಚ್ಚಗಳು)" ಅಡಿಯಲ್ಲಿ ಖಜಾನೆಯಿಂದ ಸೆಳೆಯಲು

ಯೋಜನಾ ಕಛೇರಿಯ ಮುಖ್ಯ ಹಣಕಾಸು ಅಧಿಕಾರಿ ಇವರಿಗೆ ಅಧಿಕಾರ ನೀಡಿದೆ ಈ ಸೌಲಭ್ಯವು 31–03–2011ರವರೆಗೆ ಜಾರಿಯಲ್ಲಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಎಂ. ಶಶಿಧರ್)**

ಸರ್ಕಾರದ ಉಪ ಕಾರ್ಯದರ್ಶಿ,

ಕೆಹೆಚ್ಎಸ್‌ಡಿಆರ್‌ಪಿ,

ಪಿ.ಆರ್. 1388 ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ

**ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ**

**ವಿಷಯ** : ಶ್ರೀ ಎಂ. ವಿ. ಕೃಷ್ಣಪ್ಪ, ಹಿಂದಿನ ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ ರವರ ವಿರುದ್ಧ ಇಲಾಖಾ ವಿಚಾರಣಾ–ಆರೋಪ ಮುಕ್ತಾಯಗೊಳಿಸಿರುವ ಬಗ್ಗೆ.

**ಓದಲಾಗಿದೆ** :
1) ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 48 ಎಸ್ಎಎಂ 2000, ದಿನಾಂಕ 09–04–2001.
2) ಸರ್ಕಾರದ ಆದೇಶ ಸಂಖ್ಯೆ : ಕಸಂವಾಪ್ರ 182 ಕೆಎಂಯು 2007, ದಿನಾಂಕ 28–04–2008.
3) ಅಡಿಷನಲ್ ರಿಜಿಸ್ಟ್ರಾರ್, ವಿಚಾರಣೆಗಳು–3, ಕರ್ನಾಟಕ ಲೋಕಾಯುಕ್ತ, ಬೆಂಗಳೂರ ಅವರ ಪತ್ರ ಸಂಖ್ಯೆ : Lok/ARE-3/ENQ-05/2008-09, ದಿನಾಂಕ 25–11–2009.
4) ಲೋಕಾಯುಕ್ತ ಕರ್ನಾಟಕ ರವರ ಪತ್ರ ಸಂಖ್ಯೆ : Lok/ARE-3/ENQ-05/2008-09, ದಿನಾಂಕ 05–12–2009.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ದಿನಾಂಕ 09–04–2001ರ ಸರ್ಕಾರಿ ಆದೇಶದಲ್ಲಿ ಮೈಸೂರಿನಲ್ಲಿರುವ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆಯ ರಾಜ್ಯದಲ್ಲಿನ ದೇವಾಲಯಗಳ ಸಂರಕ್ಷಣಾ ಕಾರ್ಯದ ಹೆಸರಿನಲ್ಲಿ ಯಾವುದೇ ಸಂರಕ್ಷಣಾ ಕಾಮಗಾರಿಗಳನ್ನು ಮಾಡದೆ ಕೇವಲ ಬೋಗಸ್ ಬಿಲ್ಲುಗಳನ್ನು ಮಾಡಿ ಸರ್ಕಾರದ ಹಣವನ್ನು ದುರುಪಯೋಗಪಡಿಸಿಕೊಂಡಿರುವುದು ಸರ್ಕಾರದ ಗಮನಕ್ಕೆ ಬಂದಿರುವುದರಿಂದ ಹಾಗೂ ಈ ಅಕ್ರಮಗಳಿಗೆ ಇಲಾಖೆಯ ನಿರ್ದೇಶಕರಾಗಿದ್ದ ಶ್ರೀ ಎಂ. ವಿ. ಕೃಷ್ಣಪ್ಪ ಮತ್ತು ಇಲಾಖೆಯ ಸಹಾಯಕ ಕಾರ್ಯಪಾಲಕ ಇಂಜಿನಿಯರ್ ಆದ ಶ್ರೀ ಎಸ್. ಎಂ. ಪೂಜಾರ್ ಅವರುಗಳೇ ಕಾರಣ ಎಂಬುದಾಗಿ ಸಾಕಷ್ಟು ದೂರುಗಳು ಬಂದಿದ್ದರಿಂದ ಸದರಿ ದೂರಿನ ಸತ್ಯಾಸತ್ಯತೆಯನ್ನು ತಿಳಿಯಲು ತನಿಖೆ ನಡೆಸುವ ಸಲುವಾಗಿ ಪ್ರಕರಣವನ್ನು ಕರ್ನಾಟಕ ಲೋಕಾಯುಕ್ತಕ್ಕೆ ವಹಿಸಿ ಆದೇಶಿಸಲಾಗಿತ್ತು.

ಮೇಲೆ (2)ರಲ್ಲಿ ಓದಲಾದ ದಿನಾಂಕ 28–04–2008ರ ಸರ್ಕಾರಿ ಆದೇಶದಲ್ಲಿ ಆರೋಪಿತರಾದ ಶ್ರೀ ಎಂ. ವಿ. ಕೃಷ್ಣಪ್ಪ, ಶ್ರೀ ಎಂ. ಎಲ್. ಶಿವಶಂಕರ್ ಮತ್ತು ಶ್ರೀ ಡಿ. ವಿ. ದೇವರಾಜ್, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆಯ ಹಿಂದಿನ ನಿರ್ದೇಶಕರುಗಳು ನಿವೃತ್ತರಾಗಿರುವುದರಿಂದ ಇವರ ವಿರುದ್ಧ ವಿಚಾರಣೆ ಹೂಡಲು ಅವಕಾಶವಿರುವುದಿಲ್ಲ. ಆದ್ದರಿಂದ ಶ್ರೀ ಎಂ. ವಿ. ಕೃಷ್ಣಪ್ಪ, ಹಿಂದಿನ ನಿರ್ದೇಶಕರು, ಪ್ರಸ್ತುತ ಪ್ರಾಧ್ಯಾಪಕರು, ಮೈಸೂರು ಇವರ ವಿರುದ್ಧ ಮೇಲ್ಕಂಡ ಆರೋಪ ಕುರಿತು ಇಲಾಖಾ ವಿಚಾರಣೆ ಹಾಗೂ ವರದಿಗಾಗಿ ಪ್ರಕರಣವನ್ನು ಲೋಕಾಯುಕ್ತರಿಗೆ ವಹಿಸಲಾಗಿತ್ತು.

ಮೇಲೆ (3)ರಲ್ಲಿ ಓದಲಾದ ದಿನಾಂಕ 25–11–2009ರ ಪತ್ರದಲ್ಲಿ ಅಡಿಷನಲ್ ರಿಜಿಸ್ಟ್ರಾರ್, ವಿಚಾರಣೆಗಳು–3, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆಯಲ್ಲಿ ನಡೆಯಿತೆನ್ನಲಾದ ಕಾಮಗಾರಿಗಳಿಗೆ ನೀಡಿದ ಹಣ ದುರುಪಯೋಗ ಹಾಗೂ ಕರ್ತವ್ಯಲೋಪದ ಬಗ್ಗೆ ತನಿಖೆ ನಡೆಸಿ ಆರೋಪಿತರಾದ ಶ್ರೀ ಎಂ. ವಿ. ಕೃಷ್ಣಪ್ಪ ಇವರ ವಿರುದ್ಧ ಮಾಡಲಾದ ಯಾವುದೇ ಆರೋಪಗಳು ಸಾಬೀತಾಗಿರುವುದಿಲ್ಲ. "The charges levelled against the DGO have not been proved" ಎಂದು ವರದಿ ನೀಡಿರುತ್ತಾರೆ.

ಮೇಲೆ (4)ರಲ್ಲಿ ಓದಲಾದ ದಿನಾಂಕ 05–12–2009ರ ಪತ್ರದಲ್ಲಿ ಶ್ರೀ ಎಂ. ವಿ. ಕೃಷ್ಣಪ್ಪ ಇವರ ವಿರುದ್ಧದ ಆರೋಪಗಳ ಸಾಬೀತಾಗಿಲ್ಲವೆಂಬ ವಿಚಾರಣಾ ವರದಿಯನ್ನು ಅಂಗೀಕರಿಸಿ ಸದರಿ ಅಪಾದಿತರನ್ನು ದೋಷ ಮುಕ್ತರೆಂದು ಅದೇಶಿಸಲು ಮಾನ್ಯ ಲೋಕಾಯುಕ್ತರು ಶಿಫಾರಸ್ಸು ಮಾಡಿರುವರು.

ವಿಚಾರಣಾಧಿಕಾರಿಗಳಿಂದ ಬಂದಿರುವ ವರದಿಯನ್ನು ಮತ್ತು ಮಾನ್ಯ ಲೋಕಾಯುಕ್ತರ ಶಿಫಾರಸ್ಸನ್ನು ಕೂಲಂಕಷವಾಗಿ ಪರಿಶೀಲಿಸಲಾಯಿತು. ಈ ಪ್ರಕರಣದಲ್ಲಿ ಮಾಡಲಾಗಿರುವ ಎಲ್ಲಾ ಆರೋಪಗಳು ರುಜುವಾತಾಗಿರುವುದಿಲ್ಲವೆಂದು ವಿಚಾರಣಾಧಿಕಾರಿಗಳ ವರದಿಯಿಂದ ವ್ಯಕ್ತವಾಗುತ್ತದೆ. ವಿಚಾರಣಾಧಿಕಾರಿಗಳ ವರದಿಯನ್ನು ಹಾಗೂ ಮಾನ್ಯ ಲೋಕಾಯುಕ್ತರ ಶಿಫಾರಸ್ಸನ್ನು ಒಪ್ಪಿಕೊಂಡು ಸರ್ಕಾರವು ಮುಂದಿನಂತೆ ಆದೇಶಿಸಿರುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಕಸಂವಾಪ್ರ 182 ಕೆಎಂಯು 2007, ಬೆಂಗಳೂರು, ದಿನಾಂಕ: 22ನೇ ಮೇ, 2010**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿದ ಹಿನ್ನೆಲೆಯಲ್ಲಿ, ಸರ್ಕಾರವು ಶ್ರೀ ಎಂ. ವಿ. ಕೃಷ್ಣಪ್ಪ, ಹಿಂದಿನ ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ ಇವರನ್ನು ಸದರಿ ಅಪಾದನೆಗಳಿಂದ ದೋಷಮುಕ್ತರೆಂದು ಪರಿಗಣಿಸಿ, ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**(ಎಂ. ಕೆ. ಭರ್ಮರಾಜಪ್ಪ)**
ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ
(ಆಡಳಿತ ಕನ್ನಡ)

ಪಿ.ಆರ್. 1389

## ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ವಿಷಯ** : ಕರ್ನಾಟಕ ರಾಜ್ಯ ಗಿಡಮೂಲಿಕಾ ಔಷಧಿ ಪ್ರಾಧಿಕಾರದ ರಾಜ್ಯ ಮಟ್ಟದ ಯೋಜನಾ ಪ್ರಸ್ತಾವನೆ ಮತ್ತು ತಡಿಕೆ (Screening) ಮೌಲ್ಯಮಾಪನ ಸಮಿತಿಗೆ ಡಾ॥ ಕೇಸವ ಹೆಚ್. ಕೋರ್ಸೆ ಸಹಾಯಕ ಪ್ರಾಧ್ಯಾಪಕರು, ಎಸ್.ಡಿ.ಎಮ್. ಕಾಲೇಜು, ಉಜಿರೆ ಇವರನ್ನು ನೇಮಿಸುವ ಬಗ್ಗೆ.

**ಓದಲಾಗಿದೆ** : 1) ಸರ್ಕಾರದ ಆದೇಶ ಸಂಖ್ಯೆ : ಅಪಜೀ 81 ಎಫ್‌ಪಿಸಿ 2009, ದಿನಾಂಕ 04–01–2010.
2) ಮುಖ್ಯ ಕಾರ್ಯನಿರ್ವಹಣಾಧಿಕಾರಿ ಮತ್ತು ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ, ಕರ್ನಾಟಕ ರಾಜ್ಯ ಗಿಡಮೂಲಿಕಾ ಔಷಧಿ ಪ್ರಾಧಿಕಾರ (ಕಂಪ) ಇವರ ಪತ್ರ ಸಂಖ್ಯೆ : ಕಂಪ/ತಡಿಕೆ/2009–10, ದಿನಾಂಕ : 04–02–2010.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ದಿನಾಂಕ 04–01–2010ರ ಸರ್ಕಾರಿ ಆದೇಶದಲ್ಲಿ ಕರ್ನಾಟಕ ರಾಜ್ಯ ಗಿಡಮೂಲಿಕಾ ಔಷಧಿ ಪ್ರಾಧಿಕಾರದ ರಾಜ್ಯಮಟ್ಟದ ಯೋಜನಾ ಪ್ರಸ್ತಾವನೆ ಮತ್ತು ತಡಿಕೆ ಮೌಲ್ಯಮಾಪನ ಸಮಿತಿಯನ್ನು ರಚಿಸಲಾಗಿದೆ.

ಮೇಲೆ (2)ರಲ್ಲಿ ಓದಲಾದ ದಿನಾಂಕ : 04–02–2010ರ ಪತ್ರದಲ್ಲಿ ಮುಖ್ಯ ಕಾರ್ಯನಿರ್ವಾಹಣಾಧಿಕಾರಿ ಹಾಗೂ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ ಕರ್ನಾಟಕ ರಾಜ್ಯ ಗಿಡಮೂಲಿಕಾ ಔಷಧಿ ಪ್ರಾಧಿಕಾರ ಇವರು ಡಾ॥ ಕೇಸವ ಹೆಚ್. ಕೋರ್ಸೆ, ಸಹಾಯಕ ಪ್ರಾಧ್ಯಾಪಕರು, ಎಸ್.ಡಿ.ಎಮ್. ಕಾಲೇಜು, ಉಜಿರೆ ಇವರು ಔಷಧಿ ಸಸ್ಯಗಳ ಬಗ್ಗೆ ಜ್ಞಾನ ಹೊಂದಿರುವುದಿರಂದ ಇವರ ಸಲಹೆ ಮತ್ತು ಸೂಚನೆಗಳು ಈ ಸಮಿತಿಗೆ ನೆರವು ನೀಡುತ್ತವೆಯಾದ್ದರಿಂದ ಸದರಿಯನ್ನು ಮೇಲ್ಕಂಡ ಸಮಿತಿಗೆ ನೇಮಿಸುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಅಪಜೀ 15 ಎಫ್‌ಪಿಸಿ 2010, ಬೆಂಗಳೂರು, ದಿನಾಂಕ: 17ನೇ ಮೇ, 2010**

ಪ್ರಸ್ತಾವನೆಯಲ್ಲಿ ವಿವರಿಸಿದ ಹಿನ್ನೆಲೆಯಲ್ಲಿ ಡಾ॥ ಕೇಸವ ಹೆಚ್. ಕೋರ್ಸೆ, ಸಹಾಯಕ ಪ್ರಾಧ್ಯಾಪಕರು, ಎಸ್.ಡಿ.ಎಮ್. ಕಾಲೇಜು, ಉಜಿರೆ ಇವರನ್ನು ದಿನಾಂಕ 04–01–2010 ರಂದು ರಚಿಸಲಾದ ಕರ್ನಾಟಕ ರಾಜ್ಯ ಗಿಡಮೂಲಿಕಾ ಔಷಧಿ ಪ್ರಾಧಿಕಾರದ ರಾಜ್ಯ ಮಟ್ಟದ ಯೋಜನಾ ಮತ್ತು ತಡಿಕೆ (Screening) ಸಮಿತಿಗೆ ಸದಸ್ಯರನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆಗೆ ನೇಮಕ ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**(ಪಿ. ಆರ್. ಕಲಾವತಿ)**
ಸರ್ಕಾರದ ಅಧೀನ ಕಾರ್ಯದರ್ಶಿ,
ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ

ಪಿ.ಆರ್. 1390

## ಕಂದಾಯ ಸಚಿವಾಲಯ

**ವಿಷಯ :** ಸುಳ್ಳು ಜಾತಿ ಪ್ರಮಾಣ ಪತ್ರ ನೀಡಿರುವ ತಹಶೀಲ್ದಾರರ ವಿರುದ್ಧ ಜಂಟಿ ಇಲಾಖಾ ವಿಚಾರಣೆ ಬಗ್ಗೆ.

**ಓದಲಾಗಿದೆ** : 1. Dy. Superintendent of Police, DCRE, ಬೆಳಗಾಂ ಇವರ ಪತ್ರ ಸಂ.: CV/4/DRCE/BGM/2004, ದಿನಾಂಕ: 15–01–2005.
2. ಸರ್ಕಾರದ ಪತ್ರ ಸಂ.: ಆರ್‌ಡಿ 45 ಎಎಸ್‌ಡಿ 2005, ದಿನಾಂಕ: 08–12–2008.
3. ಜಿಲ್ಲಾಧಿಕಾರಿಗಳು, ಹಾವೇರಿ ಇವರ ಪತ್ರ ಸಂ.: ಸಿಬ್ಬಂದಿ (1) ವಹಿ–89/2008–09, ದಿನಾಂಕ 05–08–2009.
4. ಕಾರಣ ಕೇಳುವ ನೋಟೀಸು ದಿನಾಂಕ: 03–11–2009.

5. ಶ್ರೀ ಟಿ. ರಮೇಶ್, ತಹಶೀಲ್ದಾರ್‌ರವರಿಂದ ಲಿಖಿತ ಉತ್ತರ ದಿನಾಂಕ: 14–12–2009.
6. ಶ್ರೀ ಕೆ.ಎಸ್. ಹೊಸಮನಿ, ನಿವೃತ್ತ ತಹಶೀಲ್ದಾರ್‌ರವರಿಂದ ಲಿಖಿತ ಉತ್ತರ ದಿನಾಂಕ: 11–12–2009.
7. ಶ್ರೀ ಎಸ್.ಆರ್. ವೆಂಕಟೇಶ್, ತಹಶೀಲ್ದಾರ್‌ರವರಿಂದ ಲಿಖಿತ ಉತ್ತರ ದಿನಾಂಕ: 29–01–2010.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರ.ಸಂ. (1)ರಲ್ಲಿ ಸೂಪರಿಂಟೆಂಡೆಂಟ್ ಆಫ್ ಪೊಲೀಸ್, ನಾಗರೀಕ ಹಕ್ಕು ಜಾರಿದಳ, ಬೆಳಗಾಂ ಇವರು ಶ್ರೀ ಟಿ. ರಮೇಶ್, ಹಿಂದಿನ ತಹಶೀಲ್ದಾರ್, ಹಾವೇರಿ, ಶ್ರೀ ಎಸ್.ಆರ್. ವೆಂಕಟೇಶ್, ಹಿಂದಿನ ತಹಶೀಲ್ದಾರ್ ಹಾವೇರಿ ಹಾಗೂ ಶ್ರೀ ಕೆ.ಎಸ್. ಹೊಸಮನಿ, ಹಿಂದಿನ ತಹಶೀಲ್ದಾರ್, ಹಾವೇರಿ ಈ ಮೂವರು ತಹಶೀಲ್ದಾರರು ನೀಡಿರುವ ಪರಿಶಿಷ್ಟ ಪಂಗಡದ–ಜಾತಿ ಪ್ರಮಾಣ ಪತ್ರದ ಆಧಾರದ ಮೇಲೆ ಶ್ರೀ ಲೋಕೇಶ್, ಹನುಮಂತಪ್ಪ, ಭಜಂತ್ರಿ ಇವರು ಧಾರವಾಡ ವಿಶ್ವ ವಿದ್ಯಾಲಯದಲ್ಲಿ ಕೆಲಸ ಪಡೆದುಕೊಂಡಿರುವುದರಿಂದ ಸದರಿ 3 ಜನ ಅಧಿಕಾರಿಯವರ ವಿರುದ್ಧ ಶಿಸ್ತು ಕ್ರಮ ಜರುಗಿಸುವಂತೆ ಕೋರಿದ್ದಾರೆ.

ಅದರಂತೆ, ಕ್ರ.ಸಂ.(2)ರಲ್ಲಿ ಪ್ರಕರಣದಲ್ಲಿ ಭಾಗಿಯಾಗಿರುವ ತಹಶೀಲ್ದಾರರುಗಳ ವಿರುದ್ಧ ಕರಡು ದೋಷಾರೋಪಣಾ ಪಟ್ಟಿಗಳನ್ನು (ಅನುಬಂಧ 1 ರಿಂದ 4ರವರೆಗೆ) ದೃಢೀಕೃತ ದಾಖಲಾತಿಗಳೊಂದಿಗೆ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಕಳುಹಿಸಿಕೊಡುವಂತೆ ಕೋರಲಾಗಿತ್ತು. ಆ ಪ್ರಕಾರ ಕ್ರ.ಸಂ.(3)ರಲ್ಲಿ ಜಿಲ್ಲಾಧಿಕಾರಿಗಳು, ಹಾವೇರಿರವರು ಸುಳ್ಳು ಜಾತಿ ಪ್ರಮಾಣ ಪತ್ರ ನೀಡಿರುವ ಪ್ರಕರಣದಲ್ಲಿ ಭಾಗಿಯಾಗಿರುವ ಈ ಕೆಳಗೆ ಕಾಣಿಸಿದ ತಹಶೀಲ್ದಾರರುಗಳ ವಿರುದ್ಧ ಅನುಬಂಧ 1 ರಿಂದ 4ರವರೆಗೆ ದೋಷಾರೋಪಣಾ ಪಟ್ಟಿ ತಯಾರಿಸಿ ಅನುಬಂಧ–3ಕ್ಕೆ ಸಂಬಂಧಿಸಿದಂತೆ, ದೃಢೀಕೃತ ದಾಖಲೆಗಳನ್ನು ಸರ್ಕಾರಕ್ಕೆ ಕಳುಹಿಸಿರುತ್ತಾರೆ.

1) ಶ್ರೀ ಟಿ. ರಮೇಶ್, ಹಿಂದಿನ ತಹಶೀಲ್ದಾರ್, ಹಾವೇರಿ, ಉಪ ಪ್ರಾಚಾರ್ಯರು, ಜಿಲ್ಲಾ ತರಬೇತಿ ಸಂಸ್ಥೆ, ಶಿವಮೊಗ್ಗ.
2) ಶ್ರೀ ಎಸ್.ಆರ್. ವೆಂಕಟೇಶ್, ಹಿಂದಿನ ತಹಶೀಲ್ದಾರ್ ಹಾವೇರಿ ವಿಶೇಷ ಭೂ ಸ್ವಾಧೀನಾಧಿಕಾರಿಗಳು, KIADB BMPCP, ಬೆಂಗಳೂರು.
3) ಶ್ರೀ ಕೆ.ಎಸ್. ಹೊಸಮನಿ, ಹಿಂದಿನ ತಹಶೀಲ್ದಾರ್ ಹಾವೇರಿ (ಪ್ರಸ್ತುತ ನಿವೃತ್ತರು)

ಸದರಿ ಅಧಿಕಾರಿಗಳ ವಿರುದ್ಧ ದೋಷಾರೋಪಣಾ ಪಟ್ಟಿಗಳನ್ನು (ಅನುಬಂಧ 1 ರಿಂದ 4ರವರೆಗೆ) ಮೇಲೆ ಕ್ರ.ಸಂ.(4)ರಲ್ಲಿ ಓದಲಾದ ಕಾರಣ ಕೇಳುವ ನೋಟೀಸಿನೊಂದಿಗೆ ಜಾರಿಗೊಳಿಸಿ ಆ ಬಗ್ಗೆ ಅವರ ಲಿಖಿತ ಸಮಜಾಯಿಷಿಯನ್ನು ಸಲ್ಲಿಸುವಂತೆ ಸೂಚಿಸಲಾಗಿತ್ತು. ಅದಕ್ಕೆ ಉತ್ತರವಾಗಿ ಶ್ರೀ ಟಿ. ರಮೇಶ್, ತಹಶೀಲ್ದಾರ್, ಶ್ರೀ ಎಸ್.ಆರ್. ವೆಂಕಟೇಶ್, ತಹಶೀಲ್ದಾರ್ ಹಾಗೂ ಶ್ರೀ ಕೆ.ಎಸ್. ಹೊಸಮನಿ, ತಹಶೀಲ್ದಾರ್ (ಪ್ರಸ್ತುತ ನಿವೃತ್ತರು) ಇವರು ಕ್ರ.ಸಂ.(5), (6) ಮತ್ತು (7)ರಲ್ಲಿ ಓದಲಾದ ತಮ್ಮ ಲಿಖಿತ ಹೇಳಿಕೆಯಲ್ಲಿ ಸಮಜಾಯಿಷಿಯನ್ನು ನೀಡಿ ದೋಷಾರೋಪಣೆಯನ್ನು ಹೊರಿಸಿರುವ ಆಪಾದನೆಯಿಂದ ಜಾತಿ ಪ್ರಮಾಣ ಪತ್ರ ನೀಡಿದ್ದನ್ನು ಒಪ್ಪಿಕೊಂಡಿದ್ದು, ತಮ್ಮ ವೈಯಕ್ತಿಕದಿಂದಲ್ಲ ಕೇವಲ ಆಕಸ್ಮಿಕವೆಂದು ಹಾಗೂ ಜಾತಿ ಪ್ರಮಾಣ ಪತ್ರವನ್ನು ರದ್ದುಪಡಿಸಿರುವುದರಿಂದ ತಿಳಿಸಿ ತಮ್ಮನ್ನು ಆರೋಪದಿಂದ ಮುಕ್ತಗೊಳಿಸುವಂತೆ ಕೋರಿರುತ್ತಾರೆ.

ಅದರಂತೆ, ಆಪಾದಿತರ ಮೇಲೆ ಹೊರಿಸಲಾದ ಆರೋಪ ಹಾಗೂ ಸದರಿ ಆಪಾದನೆಗಳಿಗೆ ಆಪಾದಿತರು ನೀಡಿರುವ ಹೇಳಿಕೆಯನ್ನು ಪರಿಶೀಲಿಸಿ ಈಗಾಗಲೇ ಜಾತಿ ಪ್ರಮಾಣ ಪತ್ರವನ್ನು ರದ್ದು ಪಡಿಸಿರುವುದರಿಂದ, ಸರ್ಕಾರವು ಈ ಪ್ರಕರಣದಲ್ಲಿ ಭಾಗಿಯಾಗಿರುವ 3 ಜನ ಅಧಿಕಾರಿಗಳಾದ ಶ್ರೀ ಟಿ. ರಮೇಶ್, ಹಿಂದಿನ ತಹಶೀಲ್ದಾರ್, ಹಾವೇರಿ, ಶ್ರೀ ಎಸ್.ಆರ್. ವೆಂಕಟೇಶ್, ಹಿಂದಿನ ತಹಶೀಲ್ದಾರ್ ಹಾವೇರಿ, ಶ್ರೀ ಕೆ.ಎಸ್. ಹೊಸಮನಿ, ಹಿಂದಿನ ತಹಶೀಲ್ದಾರ್, ಹಾವೇರಿ (ಪ್ರಸ್ತುತ ನಿವೃತ್ತರು) ಇವರುಗಳಿಗೆ ಎಚ್ಚರಿಕೆ ನೀಡಿ ಈ ಪ್ರಕರಣವನ್ನು ಮುಕ್ತಾಯ ಮಾಡಲು ಸರ್ಕಾರವು ತೀರ್ಮಾನಿಸಿರುತ್ತದೆ. ಆದುದರಿಂದ ಈ ಕೆಳಕಂಡಂತೆ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 559 ಎಎಸ್‌ಡಿ 2009, ಬೆಂಗಳೂರು, ದಿನಾಂಕ 29–04–2010.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಶ್ರೀ ಟಿ. ರಮೇಶ್, ಹಿಂದಿನ ತಹಶೀಲ್ದಾರ್, ಹಾವೇರಿ, ಶ್ರೀ ಎಸ್.ಆರ್. ವೆಂಕಟೇಶ್, ಹಿಂದಿನ ತಹಶೀಲ್ದಾರ್, ಹಾವೇರಿ ಮತ್ತು ಶ್ರೀ ಕೆ.ಎಸ್. ಹೊಸಮನಿ, ಹಿಂದಿನ ತಹಶೀಲ್ದಾರ್, ಹಾವೇರಿ (ಪ್ರಸ್ತುತ ನಿವೃತ್ತರು) ಇವರ ವಿರುದ್ಧ ಹೂಡಲು ಉದ್ದೇಶಿಸಿದ್ದ ಇಲಾಖಾ ವಿಚಾರಣೆಯನ್ನು ಕೈಬಿಟ್ಟು ಪ್ರಕರಣವನ್ನು ಮುಕ್ತಾಯಗೊಳಿಸಿ ಆದೇಶಿಸಲಾಗಿದೆ. ಶ್ರೀ ಟಿ. ರಮೇಶ್ ಹಾಗೂ ಶ್ರೀ ಎಸ್.ಆರ್. ವೆಂಕಟೇಶ್, ಇವರು ಇನ್ನು ಮುಂದೆ ಇಂತಹ ಪ್ರಕರಣ ಮರುಕಳಿಸದಂತೆ ನೋಡಿಕೊಳ್ಳಲು ಎಚ್ಚರಿಕೆ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1247

**ಎಸ್.ಬಿ. ಸಸಾಲಟ್ಟಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಸೇವೆಗಳು–3)

**ಕಂದಾಯ ಸಚಿವಾಲಯ**

**ವಿಷಯ :** ಶ್ರೀ ಗೋವಿಂದ ಭಟ್, ಹಿಂದಿನ ವಿಶೇಷ ತಹಶೀಲ್ದಾರ್, ಗುಳೇದಗುಡ್ಡ, ಬದಾಮಿ ತಾಲ್ಲೂಕು, ಇವರ ವಿರುದ್ಧ ಇಲಾಖಾ ವಿಚಾರಣೆಯಿಂದ ಕೈಬಿಡುವ ಕುರಿತು.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 24 ಎಡಿಇ 2009 ದಿನಾಂಕ: 12–10–2009.
2. ಜಿಲ್ಲಾಧಿಕಾರಿಗಳು, ಬಾಗಲಕೋಟೆ ಜಿಲ್ಲೆ ಬಾಗಲಕೋಟೆರವರ ಪತ್ರ ಸಂಖ್ಯೆ: ಕಂಶಾ/ಸಿಬ್ಬಂದಿ/3/ವಿವ/03/09–10 ದಿನಾಂಕ: 19–12–2009.
3. ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 24 ಎಡಿಇ 2009 ದಿನಾಂಕ: 10–02–2010.
4. ಜಿಲ್ಲಾಧಿಕಾರಿಗಳು, ಬಾಗಲಕೋಟೆ ಜಿಲ್ಲೆ ಇವರ ಪತ್ರ ಸಂಖ್ಯೆ: ಕಂಶಾ/ಸಿಬ್ಬಂದಿ/3/ವಿವ3/09–10 ದಿನಾಂಕ: 25–03–2010.

**ಪ್ರಸ್ತಾವನೆ:**

ಮೇಲಿನ ಕ್ರಮ ಸಂಖ್ಯೆ(1)ರಲ್ಲಿ ಓದಲಾದ ದಿನಾಂಕ: 12–10–2009ರ ಆದೇಶದಲ್ಲಿ ಬಾಗಲಕೋಟೆ ಜಿಲ್ಲೆಯಲ್ಲಿ ನೆರೆ ಪೀಡಿತ ಪ್ರದೇಶಗಳಿಗೆ ಮಾನ್ಯ ಉನ್ನತ ಶಿಕ್ಷಣ ಸಚಿವರು ಭೇಟಿ ನೀಡಿದಾಗ ಅಲ್ಲಿರುವ ಸಾರ್ವಜನಿಕರು ಶ್ರೀ ಎ. ಗೋವಿಂದ ಭಟ್ ವಿಶೇಷ ತಹಶೀಲ್ದಾರ್, ಗುಳೇದಗುಡ್ಡ, ಬದಾಮಿ ತಾಲ್ಲೂಕು. ಬಾಗಲಕೋಟೆ ಜಿಲ್ಲೆ, ಇವರು ನೆರೆ ಪೀಡಿತ ಪ್ರದೇಶಗಳಲ್ಲಿ ಪ್ರವಾಹದಿಂದ ಭಾದಿತರಾದ ಜನರ ರಕ್ಷಣೆ ಮಾಡಲು ಕ್ರಮ ಕೈಗೊಂಡಿಲ್ಲವೆಂದು ಹಾಗೂ ದಿನಾಂಕ: 29–09–2009 ರಿಂದ 04–10–2009ರ ವರೆಗೆ ಉಂಟಾದ ಅತಿವೃಷ್ಟಿ ಸಂಬಂಧದಲ್ಲಿ ಸಮರ್ಪಕವಾಗಿ ಕರ್ತವ್ಯ ನಿರ್ವಹಿಸಿಲ್ಲ. ಹಾಗೂ ಸದರಿಯವರು ಸಾರ್ವಜನಿಕರಿಗೆ ಉಂಟಾಗಿರುವ ತೊಂದರೆಗಳಿಗೆ ಸ್ಪಂದಿಸಿರುವುದಿಲ್ಲ. ಹಾಗೂ ಪ್ರಕೃತಿ ವಿಕೋಪದಂತಹ ಸಂದರ್ಭದಲ್ಲಿ ಜನರ ರಕ್ಷಣೆಗೆ ಕ್ರಮ ಕೈಗೊಳ್ಳದಿರುವುದು ಹಾಗೂ ಗಂಭೀರ ಸ್ವರೂಪದ ಕರ್ತವ್ಯಲೋಪ ಎಸಗಿರುವುದು ಮೇಲ್ನೋಟಕ್ಕೆ ಕಂಡು ಬಂದಿರುವುದರಿಂದ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ) 1957ರ ನಿಯಮಾವಳಿ ನಿಯಮ 10(1)(ಡಿ)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಎ. ಗೋವಿಂದ ಭಟ್, ವಿಶೇಷ ತಹಶೀಲ್ದಾರ್, ಗುಳೇದಗುಡ್ಡ ಬಾದಾಮಿ ತಾಲ್ಲೂಕು, ಬಾಗಲಕೋಟೆ ಜಿಲ್ಲೆ, ಇವರ ವಿರುದ್ಧ ಇಲಾಖಾ ವಿಚಾರಣೆ ಬಾಕಿ ಇರಿಸಿ, ಸೇವೆಯಿಂದ ಅಮಾನತ್ತಿನಲ್ಲಿ ಇಡಲಾಗಿತ್ತು.

ಬಾದಾಮಿ ಕ್ಷೇತ್ರದ ಮಾನ್ಯ ಶಾಸಕರು ಮಾನ್ಯ ಕಂದಾಯ ಸಚಿವರಿಗೆ ಮನವಿ ಸಲ್ಲಿಸಿ, ಸದರಿ ಶ್ರೀ ಎ. ಗೋವಿಂದ ಭಟ್‌ರವರು ನೆರೆ ಹಾವಳಿ ಸಮಯದಲ್ಲಿ ದಕ್ಷತೆಯಿಂದ ಕಾರ್ಯನಿರ್ವಹಿಸಿರುತ್ತಾರೆ. ಇವರ ಬಗ್ಗೆ ಯಾವುದೇ ಲಿಖಿತ ದೂರುಗಳು ಇರುವುದಿಲ್ಲವಾದ್ದರಿಂದ ಇವರ ಅಮಾನತ್ತು ಆದೇಶವನ್ನು ರದ್ದುಪಡಿಸಿ, ಸೇವೆಗೆ ನಿಯುಕ್ತಿಗೊಳಿಸಬೇಕೆಂದು ಕೋರಿರುತ್ತಾರೆ. ಈ ಹಿನ್ನೆಲೆಯಲ್ಲಿ ಸರ್ಕಾರವು ಶ್ರೀ ಎ. ಗೋವಿಂದ ಭಟ್ ವಿಶೇಷ ತಹಶೀಲ್ದಾರ್ ಇವರ ವಿರುದ್ಧ ಇಲಾಖಾ ವಿಚಾರಣಾ ಕಾಯ್ದಿರಿಸಿ ಈ ಕೂಡಲೇ ಜಾರಿಗೆ ಬರುವಂತೆ ಅಮಾನತ್ತು ಆದೇಶವನ್ನು ತೆರವುಗೊಳಿಸಿ, ಸೇವೆಗೆ ಪುನರ್ ನೇಮಿಸಲು ನಿರ್ಧರಿಸಿ ಮೇಲೆ ಓದಲಾದ ಕ್ರಮ ಸಂಖ್ಯೆ: (3) ದಿನಾಂಕ: 10–02–2010ರ ಆದೇಶದಲ್ಲಿ ಶ್ರೀ ಎ. ಗೋವಿಂದ ಭಟ್, ಹಿಂದಿನ ವಿಶೇಷ ತಹಶೀಲ್ದಾರ್ ಗುಳೇದಗುಡ್ಡ (ಪ್ರಸ್ತುತ ಅಮಾನತ್ತಿನಲ್ಲಿರುವ) ಇವರನ್ನು 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 10(5)(ಸಿ)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಅವರ ವಿರುದ್ಧದ ಇಲಾಖಾ ವಿಚಾರಣಾ ಕಾಯ್ದಿರಿಸಿ ಕೂಡಲೇ ಜಾರಿಗೆ ಬರುವಂತೆ ಸದರಿಯವರ ಅಮಾನತ್ತನ್ನು ತೆರವುಗೊಳಿಸಿ ಆದೇಶಿಸಲಾಗಿರುತ್ತದೆ.

ಮೇಲೆ ಓದಲಾದ ಕ್ರಮ ಸಂಖ್ಯೆ: (4)ರ ದಿನಾಂಕ: 25–03–2010ರ ಪತ್ರದಲ್ಲಿ ಜಿಲ್ಲಾಧಿಕಾರಿಗಳು, ಬಾಗಲಕೋಟೆ ಜಿಲ್ಲೆ ಇವರು ಶ್ರೀ ಎ. ಗೋವಿಂದ ಭಟ್, ಹಿಂದಿನ ವಿಶೇಷ ತಹಶೀಲ್ದಾರ್, ಗುಳೇದಗುಡ್ಡ ಇವರ ಮನವಿಯ ಬಗ್ಗೆ ವಿಚಾರಣೆ ಮಾಡಿ ವರದಿ ಸಲ್ಲಿಸುವಂತೆ ಉಪ ವಿಭಾಗಾಧಿಕಾರಿಗಳು, ಬಾಗಲಕೋಟೆ ಇವರಿಗೆ ಸೂಚಿಸಲಾಗಿತ್ತು. ಅದರಂತೆ ಉಪ ವಿಭಾಗಾಧಿಕಾರಿಗಳು ವರದಿ ಸಲ್ಲಿಸಿ ಶ್ರೀ ಎ. ಗೋವಿಂದ ಭಟ್, ಹಿಂದಿನ ವಿಶೇಷ ತಹಶೀಲ್ದಾರ್, ಗುಳೇದಗುಡ್ಡ ಇವರ ಅಪಾದನೆಗಳನ್ನು ಕುರಿತು ತಹಶೀಲ್ದಾರ್ ಬಾದಾಮಿ ಹಾಗೂ ವಿಶೇಷ ತಹಶೀಲ್ದಾರ್, ಗುಳೇದಗುಡ್ಡ ಇವರಿಗೆ ಪತ್ರ ಬರೆಯಲಾಗಿತ್ತು. ಸದರಿ ಇಬ್ಬರೂ ಅಧಿಕಾರಿಗಳು ಶ್ರೀ ಎ. ಗೋವಿಂದ ಭಟ್, ಇವರ ಮೇಲಿನ ದೂರುಗಳು ಸ್ವೀಕೃತವಾಗಿಲ್ಲವೆಂದು ತಿಳಿಸಿರುತ್ತಾರೆ. ಅದಲ್ಲದೆ ಸ್ಥಳೀಯ ಶಾಸಕರಾದ ಶ್ರೀ ಎಂ.ಕೆ. ಪಟ್ಟಣಶೆಟ್ಟಿ, ಇವರು ಶ್ರೀ ಎ. ಗೋವಿಂದ ಭಟ್, ಹಿಂದಿನ ವಿಶೇಷ ತಹಶೀಲ್ದಾರ್, ಗುಳೇದಗುಡ್ಡರವರು ನೆರೆ ಹಾವಳಿ ಸಮಯದಲ್ಲಿ ಉತ್ತಮ ಸೇವೆ ಸಲ್ಲಿಸಿರುವುದಾಗಿ ಮಾನ್ಯ ಕಂದಾಯ ಸಚಿವರಿಗೆ ಪತ್ರ ಬರೆದಿದ್ದಾರೆ. ಕಾರಣ ಮೇಲ್ಕಂಡ ಅಂಶಗಳಿಂದ ಹಾಗೂ ಯಾವುದೇ ನಿರ್ಧಿಷ್ಟ ನಿಖರವಾದ ಅಪಾದನೆ ರುಜುವಾತು ಮಾಡುವ ದಾಖಲಾತಿಗಳು ಇಲ್ಲದ ಕಾರಣ ದೋಷಾರೋಪಣಗಳನ್ನು ಸಿದ್ಧಪಡಿಸಲು ಸಾಧ್ಯವಾಗುವುದಿಲ್ಲವೆಂದು ಉಪ ವಿಭಾಗಾಧಿಕಾರಿಗಳು ವರದಿ ಮಾಡಿರುತ್ತಾರೆ. ಎಂದು ತಿಳಿಸುತ್ತಾ ಸರ್ಕಾರದ ಗಮನಕ್ಕೆ ಹಾಗೂ ಮುಂದಿನ ಕ್ರಮಕ್ಕಾಗಿ ವರದಿ ಸಲ್ಲಿಸಿರುತ್ತಾರೆ.

ಜಿಲ್ಲಾಧಿಕಾರಿಗಳು, ಬಾಗಲಕೋಟೆ ಜಿಲ್ಲೆ ಇವರ ವರದಿಯನ್ನು ಸರ್ಕಾರವು ಪರಿಶೀಲಿಸಿ, ಜಿಲ್ಲಾಧಿಕಾರಿಗಳ ವರದಿಯಲ್ಲಿ ತಿಳಿಸಿರುವಂತೆ ಶ್ರೀ ಎ. ಗೋವಿಂದ ಭಟ್, ಹಿಂದಿನ ವಿಶೇಷ ತಹಶೀಲ್ದಾರ್, ಗುಳೇದಗುಡ್ಡ, ಬಾದಾಮಿ ತಾಲ್ಲೂಕು,

ಬಾಗಲಕೋಟೆ ಜಿಲ್ಲೆ ಇವರ ವಿರುದ್ಧದ ಅಪಾದನೆಗಳು/ಲಿಖಿತ ದೂರುಗಳು ಇಲ್ಲದಿರುವುದರಿಂದ, ಇಲಾಖಾ ವಿಚಾರಣೆ ನಡೆಸುವ ಅವಶ್ಯಕತೆ ಇಲ್ಲವೆಂದು ತೀರ್ಮಾನಿಸಿ ಸದರಿಯವರ ವಿರುದ್ಧ ಈ ಪ್ರಕರಣದಲ್ಲಿ ಹೂಡಲು ಉದ್ದೇಶಿಸಲಾಗಿದ್ದ ಇಲಾಖಾ ವಿಚಾರಣೆಯಿಂದ ಕೈಬಿಡಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ ಆರ್‌ಡಿ 24 ಎಡಿಇ 2009 ಬೆಂಗಳೂರು, ದಿನಾಂಕ 05–05–2010.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಎ. ಗೋವಿಂದ ಭಟ್, ಹಿಂದಿನ ವಿಶೇಷ ತಹಶೀಲ್ದಾರ್, ಗುಳೇದಗುಡ್ಡ, ಬಾದಾಮಿ ತಾಲ್ಲೂಕು, ಬಾಗಲಕೋಟೆ ಜಿಲ್ಲೆ ಪ್ರಸ್ತುತ ಸ್ಥಳ ನಿರೀಕ್ಷಣೆಯಲ್ಲಿರುವ ಇವರ ವಿರುದ್ಧ ಅಪಾದನೆ/ದೂರುಗಳು ಇಲ್ಲದಿರುವುದರಿಂದ ಈ ಪ್ರಕರಣದಲ್ಲಿ ಉದ್ದೇಶಿಸಲಾಗಿದ್ದ ಇಲಾಖಾ ವಿಚಾರಣೆಯಿಂದ ಕೈಬಿಟ್ಟು ಆದೇಶಿಸಿದೆ.

ಶ್ರೀ ಎ. ಗೋವಿಂದ ಭಟ್, ಹಿಂದಿನ ತಹಶೀಲ್ದಾರ್, ಗುಳೇದಗುಡ್ಡ, ಇವರು ಅಮಾನತ್ತಿನಲ್ಲಿ ಕಳೆದ ಅವಧಿಯನ್ನು ಕೆ.ಸಿ.ಎಸ್.ಆರ್. ನಿಯಮ 100 (1)(ಬಿ) ರನ್ವಯ ಕರ್ತವ್ಯದ ಅವಧಿಯೆಂದು ಪರಿಗಣಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಸ್.ಬಿ. ಸಸಾಲಟ್ಟಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಸೇವೆಗಳು–3)

ಪಿ.ಆರ್. 1248

**ಆರ್ಥಿಕ ಸಚಿವಾಲಯ**

**ವಿಷಯ :** ಶ್ರೀಮತಿ ಹೆಚ್.ವಿ. ಸರಸ್ವತಿ, ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರು, ಇವರ ವಿರುದ್ಧ ದಾಖಲಾದ ಟ್ರ್ಯಾಪ್ ಪ್ರಕರಣದ ಅಭಿಯೋಜನಾ ಮಂಜೂರಾತಿ ನೀಡುವ ಬಗ್ಗೆ.

**ಓದಲಾಗಿದೆ:**
1) ಅಪರ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರ ಪತ್ರ ಸಂಖ್ಯೆ: ಲೋಕ್/ಐಎನ್‌ವಿ(ಜಿ)/ಸಿಟಿ/ಕ್ರೈಂ–72/2009 ದಿನಾಂಕ: 29–1–2010.
2) ತನಿಖಾಧಿಕಾರಿಯವರ ವರದಿ ದಿನಾಂಕ: 08–01–2010.
3) ತನಿಖಾ ದಾಖಲೆಗಳಾದ ಫಿರ್ಯಾದು, ಪ್ರಥಮ ವರ್ತಮಾನ ವರದಿ, ಪ್ರಾಯೋಗಿಕ ಪಂಚನಾಮೆ, ಜಪ್ತಿ ಪಂಚನಾಮೆ, ಸ್ವತ್ತುಗಳ ಪಟ್ಟಿ, ರಾಸಾಯನಿಕ ಪರೀಕ್ಷಕರ ವರದಿ, ಸಾಕ್ಷಿದಾರರ ಹೇಳಿಕೆಗಳು, ಲಂಚದ ಬೇಡಿಕೆಗೆ ಸಂಬಂಧಪಟ್ಟ ಕಡತಗಳು.
4) ಅಪರ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರ ಪತ್ರ ಸಂಖ್ಯೆ: ಲೋಕ್/ಐಎನ್‌ವಿ(ಜಿ)/ಸಿಟಿ/ಕ್ರೈಂ–72/2009 ದಿನಾಂಕ: 15–04–2010.

**ಪ್ರಸ್ತಾವನೆ:**

ಶ್ರೀಮತಿ ಹೆಚ್.ವಿ. ಸರಸ್ವತಿ, ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರು, ಇವರ ವಿರುದ್ಧ ಗುನ್ನೆ ಸಂಖ್ಯೆ: 72/2009 ರಲ್ಲಿ ಆರಕ್ಷಕ ನಿರೀಕ್ಷಕರು, ಪೊಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ನಗರ ಪೊಲೀಸ್ ಠಾಣೆಯಲ್ಲಿ ದಾಖಲಿಸಿರುವ ಪ್ರಕರಣದ ತನಿಖಾಧಿಕಾರಿಯವರ ಅಂತಿಮ ವರದಿ ಮತ್ತು ತನಿಖಾ ದಾಖಲಾತಿಗಳನ್ನು ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು, (ಪೊಲೀಸ್ ವಿಭಾಗ), ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರು ಮೇಲೆ ಓದಲಾಗಿರುವ ಕ್ರಮ ಸಂಖ್ಯೆ: (1)ರ ಪತ್ರ ದಿನಾಂಕ: 29–01–2010 ರೊಡನೆ ಕಳುಹಿಸುತ್ತಾ, ಆಪಾದಿತ ಅಧಿಕಾರಿಯವರನ್ನು ಘನ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ಲಂಚ ನಿರೋಧಕ ಕಾಯ್ದೆ 1988ರ ಕಲಂ 19(1)(ಸಿ) ರಡಿಯಲ್ಲಿ ಮಂಜೂರಾತಿಗಾಗಿ ಸಕ್ಷಮ ಪ್ರಾಧಿಕಾರವಾದ ಸರ್ಕಾರವನ್ನು ಕೋರಿರುತ್ತಾರೆ.

ಸಕ್ಷಮ ಪ್ರಾಧಿಕಾರವಾದ ಸರ್ಕಾರವು ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು, (ಪೊಲೀಸ್ ವಿಭಾಗ), ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರು ದಿನಾಂಕ: 29–1–2010ರ ಪತ್ರದೊಡನೆ ಕಳುಹಿಸಿಕೊಟ್ಟ ಈ ಕೆಳಕಂಡ ದಾಖಲಾತಿಗಳನ್ನು ಪರಿಶೀಲಿಸಲಾಗಿದೆ.

1) ಶ್ರೀ ಪಿ. ಸುರೇಶ್, ಬಿನ್. ಪಿ. ರಂಗಯ್ಯ, ನಿತೀಶ್ ಗ್ರಾನೈಟ್ಸ್, ನಂ.75, 76, ಅಂತರಸನಹಳ್ಳಿ, ಕೈಗಾರಿಕಾ ಪ್ರದೇಶ, ತುಮಕೂರು ರವರ ದೂರು ದಿನಾಂಕ: 03–11–2009.
2) ಪ್ರಥಮ ವರ್ತಮಾನ ವರದಿ: ಬೆಂಗಳೂರು ನಗರ ಲೋಕಾಯುಕ್ತ ಪೊಲೀಸ್ ಠಾಣೆ ಪ್ರಕರಣದ ಸಂಖ್ಯೆ: 72/2009.
3) ಪ್ರಾಯೋಗಿಕ ಪಂಚನಾಮೆ ದಿನಾಂಕ: 03–11–2009.

4) ಟ್ರ್ಯಾಪ್‌ನ ಮಹಜರ್ ದಿನಾಂಕ: 03–11–2009.
5) ರಾಸಾಯನಿಕ ಪರೀಕ್ಷಕರ ಪರೀಕ್ಷಣಾ ವರದಿ ಸಂಖ್ಯೆ: ಪಿಹೆಚ್‌ಐ/ಸಿಎಂಇ/ಲೋಕ್–132/09–10 ದಿನಾಂಕ: 19–11–2009.
6) ಕೃತ್ಯ ನಡೆದ ಸ್ಥಳದ ನಕಾಶೆ: ಸಂಖ್ಯೆ: ಸಕಾಅ/ಕಉವಿ–4/ಕೃತ್ಯ ನಡೆದ ಸ್ಥಳದ ನಕಾಶೆ/09–10/841 ದಿನಾಂಕ: 19–01–2010.
7) ಸಾಕ್ಷಿ ಹೇಳಿಕೆಗಳ ಪಟ್ಟಿ:
   1. ಶ್ರೀ ಪಿ ಸುರೇಶ್, ಫಿರ್ಯಾದಿ
   2. ಶ್ರೀಮತಿ ಮಂಜುಳ, ಪಂಚರು ಮತ್ತು ನೆರಳು ಸಾಕ್ಷಿದಾರರು
   3. ಶ್ರೀ ವಿಶ್ವನಾಥ ಆರಾಧ್ಯ, ಪಂಚರು
   4. ಶ್ರೀಮತಿ ಸುಮಿತ್ರ ವಾಣಿಜ್ಯ ತೆರಿಗೆ ಪರಿವೀಕ್ಷಕರು, ಪ್ರತ್ಯಕ್ಷ ಸಾಕ್ಷಿ
   5. ಶ್ರೀ ಸೈಯದ್ ಜಮಾಲ್, ವಾಣಿಜ್ಯ ತೆರಿಗೆ ಜಂಟಿ ಆಯುಕ್ತರು, ವಾಣಿಜ್ಯ ತೆರಿಗೆ ಇಲಾಖೆ
   6. ಶ್ರೀ ವೈ.ಎನ್. ದೇಶಿಕ, ಸಾಕ್ಷಿ
   7. ಶ್ರೀ ವೆಂಕಟೇಶ್ ಸಿ. ಪೊಲೀಸ್ ಕಾನ್‌ಸ್ಟೇಬಲ್, ಸಾಕ್ಷಿ
   8. ಶ್ರೀ ಕೆ. ರಮೇಶ, ಪೊಲೀಸ್ ಕಾನ್‌ಸ್ಟೇಬಲ್, ಸಾಕ್ಷಿ
   9. ಶ್ರೀಮತಿ ಎಂ. ಮಮತ, ಮಹಿಳಾ ಪೊಲೀಸ್ ಕಾನ್‌ಸ್ಟೇಬಲ್, ಸಾಕ್ಷಿ
   10. ಶ್ರೀ ದಯಾನಂದ, ಪೊಲೀಸ್ ಕಾನ್ಸ್‌ಸ್ಟೇಬಲ್, ಸಾಕ್ಷಿ.
8) ಲಂಚ ಕೇಳಲು ಆಧಾರವಾದ ಕಡತ ಅಥವಾ ದಾಖಲೆಗಳ ಸಂಖ್ಯೆ 1
9) ಆಪಾದಿತರಾದ ಶ್ರೀಮತಿ ಹೆಚ್.ವಿ. ಸರಸ್ವತಿ, ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರು, ಇವರ ಸಮಜಾಯಿಷಿ.

ತನಿಖಾಧಿಕಾರಿಗಳಾದ ಶ್ರೀ ಕೆ.ಸಿ. ಲಕ್ಷ್ಮಿನಾರಾಯಣ, ಪೊಲೀಸ್ ಇನ್ಸ್‌ಪೆಕ್ಟರ್ ಸಿಟಿ ಡಿವಿಜನ್, ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರು ಶ್ರೀಮತಿ ಹೆಚ್.ವಿ. ಸರಸ್ವತಿ, ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರುರವರ ವಿರುದ್ಧ ದಂಡನಾರ್ಹ ಪ್ರಕರಣವನ್ನು ಕರ್ನಾಟಕ ಲೋಕಾಯುಕ್ತ, ಬೆಂಗಳೂರು ನಗರ ಪೊಲೀಸ್ ಠಾಣೆಯಲ್ಲಿ ಗುನ್ನೆ ಸಂಖ್ಯೆ: 72/2009 ರಲ್ಲಿ ಲಂಚ ನಿರೋಧಕ ಕಾಯ್ದೆ 1988ರ ಕಲಂ 7, 13(1)(ಡಿ) ಜೊತೆಯಲ್ಲಿ 13(2) ರಡಿಯಲ್ಲಿ ದಾಖಲಿಸಿಕೊಂಡಿರುತ್ತಾರೆ.

ಆಪಾದಿತರು ಶ್ರೀಮತಿ ಹೆಚ್.ವಿ. ಸರಸ್ವತಿ, ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರು, ಫಿರ್ಯಾದಿಯಾದ ಶ್ರೀ ಪಿ. ಸುರೇಶ್, ಬಿನ್. ಪಿ. ರಂಗಯ್ಯ, ನಿತೀಶ್ ಗ್ರಾನೈಟ್ಸ್, ನಂ.–75, 76, ಅಂತರಸನಹಳ್ಳಿ, ಕೈಗಾರಿಕಾ ಪ್ರದೇಶ, ತುಮಕೂರುರವರ ಕಾರ್ಖಾನೆಗೆ ಸಂಬಂಧಿಸಿದ ದಾಖಲಾತಿಗಳನ್ನು ಪರಿಶೀಲಿಸಿ, ಫಿರ್ಯಾದುದಾರರು ಪಾವತಿಸಬೇಕಾದ ತೆರಿಗೆ ಮೊತ್ತ ನಿರ್ಧರಿಸಿ, ಅವರಿಂದ ತೆರಿಗೆ ಮೊತ್ತ ಪಡೆದುಕೊಂಡು ಅಸೆಸ್‌ಮೆಂಟ್ ಆದೇಶ ಹೊರಡಿಸಬೇಕಾಗಿದ್ದುದು ಬಾಕಿ ಇದ್ದ ಕೆಲಸವಾಗಿತ್ತು. ಸದರಿ ಸರ್ಕಾರಿ ಕೆಲಸವನ್ನು ಮಾಡಲು ರೂ. 49,000/– ಗಳ ಅಕ್ರಮ ಸಂಭಾವನೆಯನ್ನು ಕೇಳಿರುತ್ತಾರೆ. ಫಿರ್ಯಾದಿಯು ಲಂಚವನ್ನು ಕೊಡಲು ಬಯಸದ ಕಾರಣ, ಸದರಿ ಸಾರ್ವಜನಿಕ ಅಧಿಕಾರಿಯ ವಿರುದ್ಧ ಕಾನೂನು ಕ್ರಮ ಕೈಗೊಳ್ಳುವ ಬಗ್ಗೆ ದೂರನ್ನು ಸಲ್ಲಿಸಿರುತ್ತಾರೆ. ಸದರಿ ದೂರಿನಂತೆ ತನಿಖಾಧಿಕಾರಿಗಳು ಬಲೆ ಬೀಸುವ ಮೊದಲಿನ ಎಲ್ಲಾ ಔಚಿತ್ಯಪೂರ್ವ ಕಾರ್ಯಕ್ರಮಗಳನ್ನು ನೆರವೇರಿಸಿದ ನಂತರ ದಿನಾಂಕ: 03–11–2009 ರಂದು ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರವರ ಕಛೇರಿ, 3ನೇ ಮಹಡಿ, ಲೆಕ್ಕಪರಿಶೋಧನೆ–61, ಶೇಷಾದ್ರಿಪುರಂ, ಬೆಂಗಳೂರು, ಈ ಸ್ಥಳದಲ್ಲಿ ಬೀಸಿದ ಟ್ರ್ಯಾಪ್ ಯಶಸ್ವಿಯಾಗಿ ಶ್ರೀಮತಿ ಹೆಚ್.ವಿ. ಸರಸ್ವತಿ, ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರು, ಅಕ್ರಮ ಸಂಭಾವನೆಯಾದ ರೂ. 49,000/– ಗಳನ್ನು ಸದರಿ ಸರ್ಕಾರಿ ಕೆಲಸವನ್ನು ಮಾಡಲು ಕೇಳಿ ಪಡೆದು, ಆ ಪೈಕಿ ರೂ. 6,000/– ಗಳನ್ನು ಇತರೆಯವರಿಗೆ ಕೊಡುವಂತೆ ತಿಳಿಸಿ, ಫಿರ್ಯಾದುದಾರರಿಗೆ ವಾಪಸ್ ನೀಡಿ, ಸಿಕ್ಕಿಹಾಕಿಕೊಂಡಿರುತ್ತಾರೆ. ಆಪಾದಿತ ಅಧಿಕಾರಿಯ ಬಲಗೈ ಮತ್ತು ಎಡಗೈ ಬೆರಳುಗಳನ್ನು ಸೋಡಿಯಂ ಕಾರ್ಬೋನೇಟ್ ದ್ರಾವಣದಲ್ಲಿ ಮಾರ್ಜನೆ ಮಾಡಿ, ಫಿನಾಪ್ತಲಿನ್ ಪರೀಕ್ಷೆಗೆ ಒಳಪಡಿಸಿದಾಗ ಅದು ಸಕಾರಾತ್ಮಕವಾಗಿ ಪ್ರತಿಕ್ರಿಯಿಸಿದ್ದು, ರಾಸಾಯನಿಕ ತಜ್ಞರ ವರದಿಯಿಂದಲೂ ಸಹ ದೃಢಪಟ್ಟಿರುತ್ತದೆ. ಅಕ್ರಮ ಸಂಭಾವನೆಯಾದ ರೂ. 43,000/– ಗಳನ್ನು ಶ್ರೀಮತಿ ಹೆಚ್.ವಿ. ಸರಸ್ವತಿ, ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರವರಿಂದ ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರವರ ಕಛೇರಿ 3ನೇ ಮಹಡಿ, ಲೆಕ್ಕಪರಿಶೋಧನೆ–61, ಶೇಷಾದ್ರಿಪುರಂ, ಬೆಂಗಳೂರು, ಈ ಸ್ಥಳದಲ್ಲಿ ಪಂಚರ ಸಮಕ್ಷಮ ವಶಪಡಿಸಿಕೊಳ್ಳಲಾಗಿದೆ.

ತನಿಖಾ ದಾಖಲೆಗಳಾದ ಫಿರ್ಯಾದು, ಪ್ರಥಮ ವರ್ತಮಾನ ವರದಿ, ಪ್ರಾಯೋಗಿಕ ಪಂಚನಾಮೆ, ಜಪ್ತಿ ಪಂಚನಾಮೆ, ಸ್ವತ್ತುಗಳ ಪಟ್ಟಿ, ರಾಸಾಯನಿಕ ಪರೀಕ್ಷಕರ ವರದಿ, ಕೃತ್ಯನಡೆದ ಸ್ಥಳದ ನಕ್ಷೆ. ಆರೋಪಿತರ ಸೇವಾ ವಿವರಗಳು, ಸಾಕ್ಷಿದಾರರ ಹೇಳಿಕೆಗಳು, ಲಂಚದ ಬೇಡಿಕೆಗೆ ಸಂಬಂಧಪಟ್ಟ ಕಡತಗಳನ್ನು ಪರಿಶೀಲಿಸಲಾಗಿದೆ. ಇದರಿಂದಾಗಿ ಶ್ರೀಮತಿ ಹೆಚ್.ವಿ. ಸರಸ್ವತಿ, ವಾಣಿಜ್ಯ ತೆರಿಗೆ ಸಹಾಯಕರು, ಇವರ ಮೇಲಿನ ಆರೋಪವು ಮೇಲ್ನೋಟಕ್ಕೆ ಸಾಭೀತಾಗಿರುವುದು ಕಂಡುಬರುತ್ತದೆ.

ಈ ಎಲ್ಲಾ ಕಾರಣಗಳಿಂದ ಆಪಾದಿತರು ಲಂಚ ನಿರೋಧ ಕಾಯ್ದೆ 1988ರ ಕಲಂ 7,13(1)(ಡಿ)ರ ಜೊತೆಗೆ ಓದಲಾದ ಕಲಂ 13(2)ರ ಅಡಿಯಲ್ಲಿ ಶಿಕ್ಷಾರ್ಹ ಅಪರಾಧವನ್ನು ಎಸಗಿರುವುದು ಮೇಲ್ನೋಟಕ್ಕೆ ಸಂಪೂರ್ಣವಾಗಿ ಮನವರಿಕೆಯಾಗಿದೆ. ಆದ್ದರಿಂದ ಇವರನ್ನು ಲಂಚ ನಿರೋಧ ಕಾಯ್ದೆ 7,13(1)(ಡಿ)ರ ಜೊತೆಗೆ ಓದಲಾದ ಕಲಂ 13(2)ರ ಅಡಿಯಲ್ಲಿ ಅಭಿಯೋಜನೆಗೆ ಒಳಪಡಿಸುವುದು ಅವಶ್ಯಕವೆಂದು ಸರ್ಕಾರಕ್ಕೆ ಮನವರಿಕೆಯಾಗಿರುತ್ತದೆ.

ಸಕ್ಷಮ ಪ್ರಾಧಿಕಾರವಾದ ಸರ್ಕಾರವು ಆಪಾದಿತ ಅಧಿಕಾರಿಯನ್ನು ಕೆಲಸದಿಂದ ತೆಗೆದುಹಾಕುವ ಅಧಿಕಾರವನ್ನು ಹೊಂದಿರುತ್ತದೆ. ಆದ್ದರಿಂದ ಲಂಚ ನಿರೋಧ ಕಾಯ್ದೆ 1988ರ ಕಲಂ 19(1)(ಬಿ) ರಡಿಯಲ್ಲಿ ಆಪಾದಿತ ಅಧಿಕಾರಿಯಾದ ಶ್ರೀಮತಿ ಹೆಚ್.ವಿ. ಸರಸ್ವತಿ, ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರವರನ್ನು ಲಂಚ ನಿರೋಧ ಕಾಯ್ದೆ 1988ರ ಕಲಂ 7 ಮತ್ತು 13(1)(ಡಿ) ಜೊತೆಗೆ 13(2) ರಡಿಯಲ್ಲಿ ಅಭಿಯೋಜನೆಗೆ ಒಳಪಡಿಸಲು ಮಂಜೂರಾತಿ ನೀಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಮೇಲೆ ಓದಲಾಗಿರುವ ಕ್ರಮ ಸಂಖ್ಯೆ: (4)ರಲ್ಲಿ ಅಪರ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರುರವರ ಪತ್ರ ದಿನಾಂಕ: 15–04–2010ರ ಹಿನ್ನೆಲೆಯಲ್ಲಿ ಪರಿಷ್ಕೃತ ಆದೇಶ ಹೊರಡಿಸುವ ಅಗತ್ಯ ಕಂಡುಬಂದಿದ್ದು, ಅದರಂತೆ ಈ ಕೆಳಕಂಡ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆಇ 51 ವಾತೆತ 2009 ಬೆಂಗಳೂರು, ದಿನಾಂಕ: 05–05–2010.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಮೇರೆಗೆ ಲಂಚ ನಿರೋಧಕ ಕಾಯ್ದೆ 1988ರ ಕಲಂ 19(1)(ಬಿ) ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎಸ್.ಆರ್. ರಾಜಗೋಪಾಲ್, ಪೀಠಾಧಿಕಾರಿ, ಆರ್ಥಿಕ ಇಲಾಖೆ, ವಾಣಿಜ್ಯ ತೆರಿಗೆ–2 ಶಾಖೆ ಆದ ನಾನು ಆಪಾದಿತ ಅಧಿಕಾರಿಯಾದ ಶ್ರೀಮತಿ ಹೆಚ್.ವಿ. ಸರಸ್ವತಿ, ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರು, ಇವರನ್ನು ಲಂಚ ನಿರೋಧಕ ಕಾಯ್ದೆ 1988ರ ಕಲಂ 7, 13(1)(ಡಿ) ಜೊತೆಯಲ್ಲಿ ಓದಲಾದ ಕಲಂ 13(2) ರಡಿಯಲ್ಲಿ ಎಸಗಿರುವ ಅಪರಾಧಕ್ಕಾಗಿ ಅಭಿಯೋಜಿಸಲು ಲೋಕಾಯುಕ್ತ ಪೊಲೀಸರಿಗೆ ಈ ಮೂಲಕ ಅನುಮತಿ ನೀಡಿದೆ.

ಕರ್ನಾಟಕ ಸರ್ಕಾರದ (ವ್ಯವಹಾರ ನಿರ್ವಹಣೆ) ನಿಯಮಗಳು, 1977ರ ನಿಯಮ 18ರ ಪ್ರಕಾರ, ಈ ಆದೇಶವನ್ನು ನನ್ನ ಕಛೇರಿಯ ಮೊಹರು ಮತ್ತು ಸಹಿಯ ಅಡಿಯಲ್ಲಿ ದಿನಾಂಕ: 05–05–2010 ರಂದು ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1249

**ಎಸ್.ಆರ್. ರಾಜಗೋಪಾಲ್**

**ಪೀಠಾಧಿಕಾರಿ**

ಆರ್ಥಿಕ ಇಲಾಖೆ (ವಾಣಿಜ್ಯ ತೆರಿಗೆ–2)

## ಪಶುಸಂಗೋಪನೆ ಮತ್ತು ಮೀನುಗಾರಿಕೆ ಸಚಿವಾಲಯ

**ವಿಷಯ :** ನೂತನ ಜಿಲ್ಲೆಯಾಗಿ ರಚನೆಗೊಂಡಿರುವ ಯಾದಗಿರಿಗೆ ಹೊಸದಾಗಿ ಹುದ್ದೆಗಳನ್ನು ಸೃಜಿಸುವ ಹಾಗೂ ಗುಲ್ಬರ್ಗಾ ಜಿಲ್ಲೆಯಿಂದ ಹುದ್ದೆಗಳನ್ನು ಮರುವಿನ್ಯಾಸಗೊಳಿಸುವಿಕೆ.

**ಓದಲಾಗಿದೆ:**
(1) ಅಧಿಸೂಚನೆ ಸಂಖ್ಯೆ: ಆರ್‌ಡಿ 59 ಭೂದಾಪು 2008, ದಿನಾಂಕ: 15–09–2009.
(2) ಅರೆಸರ್ಕಾರಿ ಪತ್ರ ಸಂಖ್ಯೆ: ವಿಯಾಜಿ/ಸಿಬ್ಬಂದಿ/01/2009–10, ದಿನಾಂಕ: 28–09–2009.
(3) ಪತ್ರ ಸಂಖ್ಯೆ: ಆಪಸಂ/ಡಿವಿಡಿ–3/ವಿವ–35/2009–10, ದಿನಾಂಕ: 09–11–2009.
(4) ಸರ್ಕಾರಿ ಆದೇಶ ಸಂಖ್ಯೆ: ಕಂಇ/71 ಭೂದಾಪು 2009, ದಿನಾಂಕ: 23–02–2010.

**ಪ್ರಸ್ತಾವನೆ:**

1. ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಅಧಿಸೂಚನೆಯಲ್ಲಿ ಗುಲ್ಬರ್ಗಾ ಜಿಲ್ಲೆಯನ್ನು ವಿಭಜಿಸಿ ಯಾದಗೀರ್, ಶಹಾಪುರ ಹಾಗೂ ಶೋರಾಪುರ್ ತಾಲ್ಲೂಕುಗಳನ್ನೊಳಗೊಂಡಂತೆ ಹೊಸದಾಗಿ ಯಾದಗೀರ್ ಜಿಲ್ಲೆಯನ್ನು ರಚಿಸಲಾಗಿದೆ.

2. ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಪತ್ರದಲ್ಲಿ ವಿಶೇಷ ಅಧಿಕಾರಿಗಳು, ಯಾದಗೀರ್ ಜಿಲ್ಲೆ, ಇವರು ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆಗೆ ಸಂಬಂಧಿಸಿದಂತೆ ನೂತನ ಯಾದಗೀರ್ ಜಿಲ್ಲೆಗೆ ಅಗತ್ಯ ಹುದ್ದೆಗಳನ್ನು ಸೃಜಿಸಲು ಮಂಜೂರಾತಿ ನೀಡುವಂತೆ ಹಾಗೂ ಹೊಸದಾಗಿ ಸೃಜಿಸಿದ ಎಲ್ಲಾ ಹುದ್ದೆಗಳಿಗೆ ಸಿಬ್ಬಂದಿಯನ್ನು ಭರ್ತಿ ಮಾಡುವಂತೆ ಕೋರಿರುತ್ತಾರೆ.

3. ಮೇಲೆ ಓದಲಾದ ಕ್ರಮಸಂಖ್ಯೆ (3)ರ ಪತ್ರದಲ್ಲಿ ಆಯುಕ್ತರು, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ, ಬೆಂಗಳೂರು ಇವರು ಹೊಸ ಜಿಲ್ಲೆಯಲ್ಲಿ ಪ್ರಾರಂಭಿಸಬೇಕಾದ ಉಪನಿರ್ದೇಶಕರ ಕಛೇರಿಗೆ ಹೊಸದಾಗಿ 13 ವಿವಿಧ ವರ್ಗದ ಹುದ್ದೆಗಳನ್ನು ಸೃಜಿಸಿ ಅಗತ್ಯವಾದ ಅನುದಾನ ಒದಗಿಸಲು ಹಾಗೂ ಒಂದು ಅಟೆಂಡರ್ ಹುದ್ದೆಯನ್ನು ಉಪನಿರ್ದೇಶಕರ ಕಛೇರಿ, ಗುಲ್ಬರ್ಗಾದಿಂದ ಯಾದಗಿರಿ ಜಿಲ್ಲೆಗೆ ಮರುವಿನ್ಯಾಸಗೊಳಿಸಲು ಮಂಜೂರಾತಿ ನೀಡುವಂತೆ ಕೋರಿರುತ್ತಾರೆ.

4. ಮೇಲೆ ಓದಲಾದ ಕ್ರಮ ಸಂಖ್ಯೆ (4)ರಲ್ಲಿ ಕಂದಾಯ ಇಲಾಖೆಯು ಯಾದಗಿರಿ ಜಿಲ್ಲೆಯಲ್ಲಿ ವಿವಿಧ ಇಲಾಖೆಗಳಿಗೆ ಸಂಬಂಧಿಸಿದಂತೆ ಸಿಬ್ಬಂದಿ ಮಾದರಿ ರಚನೆ ಅನ್ವಯ ಅವಶ್ಯಕವಿರುವ ಹುದ್ದೆಗಳಲ್ಲಿ ಶೇ.25ರಷ್ಟು ಹುದ್ದೆಗಳನ್ನು ಸದ್ಯಕ್ಕೆ ಅಡ್–ಹಾಕ್ ಆಧಾರದ ಮೇಲೆ ಸೃಜಿಸಲು ಮಂಜೂರಾತಿ ನೀಡಿದೆ ಹಾಗೂ ಸಂಬಂಧಪಟ್ಟ ಇಲಾಖೆಗಳು ಅವಶ್ಯಕತೆ ಇರುವ ಹುದ್ದೆಗಳನ್ನು ಗುರುತಿಸಿ ಪ್ರತ್ಯೇಕವಾಗಿ ಆದೇಶ ಹೊರಡಿಸಿ ಶೀರ್ಘವಾಗಿ ಭರ್ತಿ ಮಾಡಿಕೊಳ್ಳುವಂತೆ ಮತ್ತು ಈ ಹುದ್ದೆಗಳಿಗೆ ಆಯವ್ಯಯ ಅವಕಾಶವನ್ನು ಸಹ ಕಲ್ಪಿಸಲು ಕ್ರಮ ಕೈಗೊಳ್ಳುವಂತೆ ಸೂಚಿಸಿದೆ.

5. ನೂತನವಾಗಿ ರಚನೆಗೊಂಡಿರುವ ಯಾದಗಿರಿ ಜಿಲ್ಲೆಯಲ್ಲಿ ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆಗೆ ಸಂಬಂಧಿಸಿದಂತೆ ಉಪನಿರ್ದೇಶಕರು (1 ಹುದ್ದೆ), ಸಹಾಯಕ ನಿರ್ದೇಶಕರು (1 ಹುದ್ದೆ) ಕಛೇರಿ ಅಧೀಕ್ಷಕರು (1 ಹುದ್ದೆ), ಪ್ರಥಮ ದರ್ಜೆ ಸಹಾಯಕರು (2 ಹುದ್ದೆ) ದ್ವಿತೀಯ ದರ್ಜೆ ಸಹಾಯಕರು (2 ಹುದ್ದೆ), ಬೆರಳಚ್ಚುಗಾರರು (1 ಹುದ್ದೆ) ಪಶುವೈದ್ಯಕೀಯ ಪರೀಕ್ಷಕರು (1 ಹುದ್ದೆ), ಪಶುವೈದ್ಯಕೀಯ ಸಹಾಯಕರು (1 ಹುದ್ದೆ), ವಾಹನ ಚಾಲಕರು (2 ಹುದ್ದೆ) ಸೇರಿದಂತೆ ಒಟ್ಟು 12 ಅವಶ್ಯಕ ಹುದ್ದೆಗಳನ್ನು ಹೊಸದಾಗಿ ಸೃಜಿಸಬೇಕಾಗಿರುತ್ತದೆ ಹಾಗೂ ಅಟೆಂಡರ್ (1 ಹುದ್ದೆ)ಯನ್ನು ಗುಲ್ಬರ್ಗಾ ಜಿಲ್ಲಾ ಉಪನಿರ್ದೇಶಕರ ಕಛೇರಿಯಿಂದ ಯಾದಗಿರಿ ಜಿಲ್ಲೆಗೆ ಮರುವಿನ್ಯಾಸಗೊಳಿಸಬೇಕಾಗಿರುತ್ತದೆ. ಕಂದಾಯ ಇಲಾಖೆ ದಿನಾಂಕ: 23–02–2010 ರಂದು ಹೊರಡಿಸಿರುವ ಆದೇಶದಲ್ಲಿ ಯಾದಗಿರಿ ಜಿಲ್ಲೆಗೆ ಅವಶ್ಯಕವಿರುವ ಹುದ್ದೆಗಳಲ್ಲಿ ಶೇ.25ರಷ್ಟು ಹುದ್ದೆಗಳನ್ನು ಸದ್ಯಕ್ಕೆ ಅಡ್–ಹಾಕ್ ಆಧಾರದ ಮೇಲೆ ಸೃಜಿಸಲು ಮಂಜೂರಾತಿ ನೀಡಿ ಈ ಬಗ್ಗೆ ಆಯಾ ಇಲಾಖೆಗಳು ಪ್ರತ್ಯೇಕವಾಗಿ ಕ್ರಮ ಕೈಗೊಂಡು ಆದೇಶ ಹೊರಡಿಸಲು ಸೂಚಿಸಿದೆ. ಈ ದಿಸೆಯಲ್ಲಿ ಎಲ್ಲಾ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿದ ಸರ್ಕಾರ ಯಾದಗೀರ್ ಜಿಲ್ಲೆಗೆ ಸಿಬ್ಬಂದಿ ಮಾದರಿ ಅನ್ವಯ ಅವಶ್ಯಕವಿರುವ ಒಟ್ಟು 13 ಹುದ್ದೆಗಳ ಪೈಕಿ ಸದ್ಯಕ್ಕೆ ಉಪನಿರ್ದೇಶಕರು (1 ಹುದ್ದೆ), ಪ್ರಥಮ ದರ್ಜೆ ಸಹಾಯಕರು (1 ಹುದ್ದೆ) ಬೆರಳಚ್ಚುಗಾರರು (1 ಹುದ್ದೆ) ಪಶುವೈದ್ಯಕೀಯ ಪರೀಕ್ಷಕರು (1 ಹುದ್ದೆ) ಒಳಗೊಂಡಂತೆ ಒಟ್ಟು 4 ಹುದ್ದೆಗಳನ್ನು ಅಡ್–ಹಾಕ್ ಆಧಾರದ ಮೇಲೆ ಸೃಜಿಸಲು ಹಾಗೂ ಒಂದು ಅಟೆಂಡರ್ ಹುದ್ದೆಯನ್ನು ಉಪನಿರ್ದೇಶಕರ ಕಛೇರಿ ಗುಲ್ಬರ್ಗಾದಿಂದ ಯಾದಗಿರಿ ಜಿಲ್ಲೆಗೆ ಮರುವಿನ್ಯಾಸಗೊಳಿಸಲು ಮಂಜೂರಾತಿ ನೀಡಲು ತೀರ್ಮಾನಿಸಿದೆ. ಆದ್ದರಿಂದ, ಈ ಆದೇಶ.

**ಆದೇಶ ಸಂಖ್ಯೆ: ಪಸಂಮೀ 517 ಪಸಸೇ 2009, ಬೆಂಗಳೂರು, ದಿನಾಂಕ: 6ನೇ ಮೇ 2010.**

6. ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ, ನೂತನವಾಗಿ ರಚನೆಗೊಂಡಿರುವ ಯಾದಗಿರಿ ಜಿಲ್ಲೆಯ ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆಗೆ ಸಂಬಂಧಿಸಿದಂತೆ ಈ ಕೆಳಕಂಡ 4 ಹುದ್ದೆಗಳನ್ನು ಅಡ್–ಹಾಕ್ (Ad-hoc) ಆಧಾರದ ಮೇಲೆ ಸೃಜಿಸಲು ಹಾಗೂ ಒಂದು ಅಟೆಂಡರ್ (ವೇತನ ಶ್ರೇಣಿ ರೂ. 4,800–7,275) ಹುದ್ದೆಯನ್ನು ಉಪನಿರ್ದೇಶಕರ ಕಛೇರಿ, ಗುಲ್ಬರ್ಗಾದಿಂದ ಯಾದಗಿರಿ ಜಿಲ್ಲೆಗೆ ಮರುವಿನ್ಯಾಸಗೊಳಿಸಲು ಮಂಜೂರಾತಿ ನೀಡಿ ಆದೇಶಿಸಿದೆ.

| ಕ್ರಮ ಸಂಖ್ಯೆ | ಹುದ್ದೆ | ವೇತನಶ್ರೇಣಿ | ಹುದ್ದೆ ಸಂಖ್ಯೆ |
|---|---|---|---|
| (1) | ಉಪ ನಿರ್ದೇಶಕರು | ರೂ. 18,150–26,925 | 1 |
| (2) | ಪ್ರಥಮ ದರ್ಜೆ ಸಹಾಯಕರು | ರೂ. 7,275–13,350 | 1 |
| (3) | ಬೆರಳಚ್ಚುಗಾರರು | ರೂ. 5,800–10,500 | 1 |
| (4) | ಪಶುವೈದ್ಯಕೀಯ ಪರೀಕ್ಷಕರು | ರೂ. 6,250–12,000 | 1 |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1250

**ಎಂ.ಪಿ. ನಾಗರಾಜ**
ಪೀಠಾಧಿಕಾರಿ–2
ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ
(ಪಶುಸಂಗೋಪನೆ–ಎ).

## COMMERCE AND INDUSTRIES SECRETARIAT

Sub: Change of name of Company from M/s SE Steel Ltd., to M/s. Synew Steel Ltd.
Read: 1) G.O.No.: CI 53 SPI 2009 dated: 04-08-2009.
2) Letter from Synew Steel Ltd., dated: 24-12-2009.

**Preamble:**

M/s. SE Steel Ltd., submitted a proposal for establishment of "Integrated Steel Plant with SEZ Status-4 Million MTPA to be extended to 10 MTPA with 635 MW Captive Power Plant" in 7000 acres of land (Acquisition & Allotment of 5,000 acres of land by KIADB, on consent of landowners as "SUC" and permission to the Company u/s 109 KLR Act to purchase the balance 2,000 acres of land) at Mulvad, Ronihala, Malaghana & Kalgurki Villages, Basavana Bagewadi Taluk, Bijapur District, with an investment of Rs. 49720 crores.

The proposal has been approved in the 17th SHLCC meeting held on 28-01-2009 & G.O. read at (1) above was issued.

Vide letter read at (2) above, the unit has requested for change of name to M/s. Synew Steel Ltd., as the implementing company.

Hence the following order.

**Government Order No. CI 53 SPI 2009, Bangalore, Dated: 10-05-2010.**

Government is pleased to accord approval to the proposal of M/s. SE Steel Ltd., to change the name from M/s. SE Steel Ltd., to M/s. Synew Steel Ltd., for implementing the project of manufacturing "Integrated Steel Plant with SEZ Status-4 Million MTPA to be extended to 10 MTPA with 635 MW Captive Power Plant" approved" in 17th SHLCC meeting held on 28-01-2009 at Mulvad, Ronihala, Malaghana & Kalgurki Villages, Basavana Bagewadi Taluk, Bijapur District.

By Order and in the name of the Governor of Karnataka

**APARNA PAVATE**
Desk Officer (Technical Cell)
Commerce & Industries Department

PR No. 1251

## COMMERCE AND INDUSTRIES SECRETARIAT

Sub: Approval to the Project Proposal of M/s. Surya Vijayanagar Steels and Power Ltd., for enhancement of integrated Steel Plant capacity from 5 Million MTPA to 6 Million MTPA.

Read: 1) Govt. Order No. CI 43 SPI 2010, Dated: 25-02-2010.
2) Proceedings of the 21st State High Level Clearance Committee (SHLCC) meeting held on 29-03-2010.

**Preamble:**

M/s. Surya Vijayanagar Steels and Power Ltd., had proposed to establish a "5 Million MTPA Integrated Steel Plant with 500 MW Captive Power Plant" in Bagalkot District, with an investment of Rs. 20,000 crores generating employment to about 10,000 persons. The proposal was approved in 20th SHLCC meeting, held on 05-01-2010 and G.O. read at (1) above has been issued.

The revised proposal of the company to increase the Capacity of Integrated Steel Plant from "5 Million MTPS" to "6 Million MTPA" and investment from 20,000 crores to 24,000 crores was approved in the 21st State High Level Clearance Committee (SHLCC) meeting held on 29-03-2010.

Hence the following order.

**Government Order No. CI 43 SPI 2010, Bangalore, Dated: 10-05-2010.**

Government is pleased to accord in principle approval to the project proposal of M/s. Surya Vijayanagar Steels and Power Ltd., to increase the Capacity of Integrated Steel Plant from "5 Million MTPA to 6 Million MTPA" investment from Rs. 20,000 crores to 24,000 crores, employment from 10,000 to 1200 persons in Bagalkot District. KIADB to acquire the land on SUC basis. Other terms and conditions of the G.O. No. CI 43 SPI 2010, dated: 25-02-2010 remain the same.

By Order and in the name of the Governor of Karnataka

**APARNA PAVATE**
Desk Officer (Technical Cell)
Commerce & Industries Department

PR No. 1252

## ನಗರಾಭಿವೃದ್ಧಿ ಸಚಿವಾಲಯ

**ವಿಷಯ :** ಗುಲ್ಬರ್ಗಾ ನಗರಾಭಿವೃದ್ಧಿ ಪ್ರಾಧಿಕಾರದ ಬಡಾವಣೆಗಳಲ್ಲಿ ಕಲ್ಯಾಣ ಮಂಟಪದ ನಿರ್ಮಾಣಕ್ಕೆ ಆಡಳಿತಾತ್ಮಕ ಅನುಮೋದನೆ ನೀಡುವ ಕುರಿತು.

**ಓದಲಾಗಿದೆ :** 1. ಆಯುಕ್ತರು ನಗರಾಭಿವೃದ್ಧಿ ಪ್ರಾಧಿಕಾರ ಗುಲ್ಬರ್ಗಾರವರ ಪತ್ರ ಸಂಖ್ಯೆ: ನಪ್ರಾಗು/ತಾಂತ್ರಿಕ/ಎಂ.ಎಸ್.ಕೆ.ವಾ/ಧಕೋ/ಕ.ಮಂಟಪ/2009–10/826. ದಿನಾಂಕ: 02–09–2009 ಮತ್ತು 2261, ದಿನಾಂಕ: 5–03–2010.
**2.** ದಿನಾಂಕ: 22–12–2008 ರಂದು ವಿಷಯ ಸಂಖ್ಯೆ: 21ರಲ್ಲಿ ಪ್ರಾಧಿಕಾರದ ಸಭೆಯ ನಿರ್ಣಯ.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮಾಂಕ (1)ರ ಪತ್ರದಲ್ಲಿ ಆಯುಕ್ತರು, ನಗರಾಭಿವೃದ್ಧಿ ಪ್ರಾಧಿಕಾರ ರವರು ಗುಲ್ಬರ್ಗಾ ನಗರಾಭಿವೃದ್ಧಿ ಪ್ರಾಧಿಕಾರದ ಎಂ.ಎಸ್.ಕೆ. ಮಿಲ್ (ವಾಣಿಜ್ಯ) ಬಡಾವಣೆ ಮತ್ತು ಧರಿಯಾಪೂರ ಕೋಟನೂರ

ಬಡಾವಣೆಗಳಲ್ಲಿ (2) ಪ್ರತ್ಯೇಕ ಕಲ್ಯಾಣ ಮಂಟಪಗಳನ್ನು ನಿರ್ಮಿಸಲು ಉದ್ದೇಶಿಸಿ ಲೋಕೋಪಯೋಗಿ ಇಲಾಖೆಯ 2009–10ನೇ ಸಾಲಿನ ದರಪಟ್ಟಿಯನ್ವಯ ಕ್ರಮವಾಗಿ ರೂ. 279.91 ಲಕ್ಷ ಮತ್ತು ರೂ. 215.27 ಲಕ್ಷಗಳಲ್ಲಿ ಬೆಸಮೆಂಟ್, ಗ್ರೌಂಡ್ ಮೊದಲನೆ ಮತ್ತು ಎರಡನೆ ಫ್ಲೋರ್ ಕಟ್ಟಲು ವಾಸ್ತುಶಿಲ್ಪಿಯವರಿಂದ ವಿನ್ಯಾಸ ನಕ್ಷೆ ಮತ್ತು ಅಂದಾಜು ಪಟ್ಟಿಯನ್ನು ತಯಾರಿಸಲಾಗಿದೆ.

ಸದರಿ ಕಲ್ಯಾಣ ಮಂಟಪಗಳನ್ನು ನಗರಾಭಿವೃದ್ಧಿ ಪ್ರಾಧಿಕಾರದ ವಶದಲ್ಲಿರುವ ಎಂ.ಎಸ್.ಕೆ. ಮಿಲ್ ವಾಣಿಜ್ಯ ಬಡಾವಣೆಯಲ್ಲಿನ 1130 ಚದರ ಮೀಟರ್ ಪ್ರದೇಶದಲ್ಲಿ ಹಾಗೂ ಧರಿಯಾಪೂರ–ಕೋಟನೂರ ಬಡಾವಣೆಯಲ್ಲಿನ 1292 ಚದರ ಮೀಟರ್ ಪ್ರದೇಶದ ಸಿ.ಡಿ.ಪಿ.ಯಲ್ಲಿ ವಾಣಿಜ್ಯಕ್ಕಾಗಿ ಕಾಯ್ದಿರಿಸಿದ ಎರಡು ನಿವೇಶನಗಳಲ್ಲಿ ಪ್ರಾಧಿಕಾರವು ನಿರ್ಮಿಸಲು ಉದ್ದೇಶಿಸಿರುತ್ತದೆ.

ಗುಲ್ಬರ್ಗಾ ನಗರದಲ್ಲಿ ಸುಸಜ್ಜಿತ ಕಲ್ಯಾಣ ಮಂಟಪಗಳು ಇಲ್ಲದಿರುವುದರಿಂದ ಹಾಗೂ ವಿಶೇಷ ಪ್ರಸ್ತಾವಿತ ಪ್ರದೇಶಗಳಲ್ಲಿ ಕಲ್ಯಾಣ ಮಂಟಪಗಳಿಗೆ ಹೆಚ್ಚಿನ ಬೇಡಿಕೆ ಇರುವುದನ್ನು ಸಮೀಕ್ಷೆ ನಡೆಸಿದ ನಂತರ ತೀರ್ಮಾನಿಸಿ, ಮೇಲೆ ಓದಲಾದ ಕ್ರಮಾಂಕ (2)ರ ಸಭೆಯಲ್ಲಿ ನಿರ್ಣಯಿಸಿ, ಸದರಿ ಕಾಮಗಾರಿಗಳಿಗೆ ತಗಲುವ ವೆಚ್ಚವನ್ನು ಪ್ರಾಧಿಕಾರವು ತನ್ನ ಸ್ವಂತ ಸಂಪನ್ಮೂಲದಿಂದ ಭರಿಸಲು ಉದ್ದೇಶಿಸಿ, 2009–10ನೇ ಸಾಲಿನ ಪ್ರಾಧಿಕಾರದ ಆಯವ್ಯಯದಲ್ಲಿ ರೂ. 200.00 ಲಕ್ಷಗಳನ್ನು ಕಾಯ್ದಿರಿಸಿಲಾಗಿದೆ ಎಂದು ತಿಳಿಸುತ್ತಾ ಕರ್ನಾಟಕ ನಗರಾಭಿವೃದ್ಧಿ ಪ್ರಾಧಿಕಾರಗಳ ಕಾಯ್ದೆ 1987 ಕಲಂ 18(2)ರನ್ವಯ ಸರ್ಕಾರದ ಆಡಳಿತಾತ್ಮಕ ಅನುಮೋದನೆ ನೀಡಲು ಕೋರಿ ಆಯುಕ್ತರು, ನಗರಾಭಿವೃದ್ಧಿ ಪ್ರಾಧಿಕಾರ ಗುಲ್ಬರ್ಗಾದವರು ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಮೇಲೆ ವಿವರಿಸಿರುವ ಅಂಶಗಳನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ನಅಇ 155 ಗುಅಪ್ರಾ 2009, ಬೆಂಗಳೂರು, ದಿನಾಂಕ 05–05–2010.**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ, ನಗರಾಭಿವೃದ್ಧಿ ಪ್ರಾಧಿಕಾರದ ವಶದಲ್ಲಿರುವ ಎಂ.ಎಸ್.ಕೆ. ಮಿಲ್ ವಾಣಿಜ್ಯ ಬಡಾವನೆಯಲ್ಲಿನ 1130 ಚದರ ಮೀಟರ್ ಪ್ರದೇಶದಲ್ಲಿ ಹಾಗೂ ಧರಿಯಾಪೂರ–ಕೋಟನೂರ ಬಡಾವಣೆಯಲ್ಲಿನ 1292 ಚದರ ಮೀಟರ್ ಪ್ರದೇಶದ ಸಿ.ಡಿ.ಪಿ.ಯಲ್ಲಿ ವಾಣಿಜ್ಯಕ್ಕಾಗಿ ಕಾಯ್ದಿರಿಸಿದ ಎರಡು ನಿವೇಶನಗಳಲ್ಲಿ ಪ್ರಾಧಿಕಾರವು (2) ಪ್ರತ್ಯೇಕ ಕಲ್ಯಾಣ ಮಂಟಪಗಳನ್ನು ನಿರ್ಮಿಸಲು ಲೋಕೋಪಯೋಗಿ ಇಲಾಖೆಯ 2009–10ನೇ ಸಾಲಿನ ದರಪಟ್ಟಿಯನ್ವಯ ಕ್ರಮವಾಗಿ ರೂ. 279.91 ಮತ್ತು ರೂ. 215.27 ಲಕ್ಷಗಳಲ್ಲಿ ಗುಲ್ಬರ್ಗಾ ನಗರಾಭಿವೃದ್ಧಿ ಪ್ರಾಧಿಕಾರವು ಕೈಗೆತ್ತಿಕೊಳ್ಳಲು ಈ ಕೆಳಕಂಡ ಷರತ್ತುಗಳಿಗೊಳಪಡಿಸಿ ಕರ್ನಾಟಕ ನಗರಾಭಿವೃದ್ಧಿ ಪ್ರಾಧಿಕಾರಗಳ ಕಾಯ್ದೆ 1987 ಕಲಂ 18(3) ರನ್ವಯ ಸರ್ಕಾರದ ಆಡಳಿತಾತ್ಮಕ ಅನುಮೋದನೆಯನ್ನು ನೀಡಿದೆ.

1) ಸದರಿ ಕಾಮಗಾರಿಯನ್ನು ನಿರ್ವಹಿಸುವಾಗ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಕಾಯ್ದೆ 1999 ಮತ್ತು ನಿಯಮ 2000ನ್ನು ಪಾಲಿಸತಕ್ಕದ್ದು.
2) ಕಾಮಗಾರಿಗಳ ಟೆಂಡರ್‌ಗಳನ್ನು ಕರೆಯುವ ಮುನ್ನ ಸರ್ಕಾರದ ಅನುಮೋದನೆ ಪಡೆದು ಆಹ್ವಾನಿಸತಕ್ಕದ್ದು.
3) ಕಾಮಗಾರಿಗಳ ಗುತ್ತಿಗೆ ನೀಡುವ ಮುನ್ನ ನಿಯಮಾವಳಿಯಂತೆ ಸರ್ಕಾರದ ಅನುಮೋದನೆ ಪಡೆದು ಗುತ್ತಿಗೆಯನ್ನು ನೀಡತಕ್ಕದ್ದು.
4) ಸದರಿ ಯೋಜನೆಯನ್ನು ನಿಗದಿತ ವೇಳೆಯಲ್ಲಿ ಪೂರ್ಣಗೊಳಿಸತಕ್ಕದ್ದು.
5) ಅಂದಾಜು ಪರಿಷ್ಕರಣೆಗೆ ಯಾವುದೇ ಅವಕಾಶ ನೀಡತಕ್ಕದಲ್ಲ.
6) ಕಾಮಗಾರಿಗಳನ್ನು ಕೈಗೊಳ್ಳಲು ಪ್ರಾಧಿಕಾರವು ತನ್ನ ಸ್ವಂತ ಸಂಪನ್ಮೂಲಗಳಿಂದ ಭರಿಸುವುದು ಹಾಗೂ ಸರ್ಕಾರದಿಂದ ಯಾವುದೇ ಆರ್ಥಿಕ ಸಹಾಯವನ್ನು ನೀಡಲಾಗುವುದಿಲ್ಲ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಡಿ 2008, ದಿನಾಂಕ: 16–05–2008 ರಡಿಯಲ್ಲಿ ಸರ್ಕಾರದ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1322

**ಸಿ.ಟಿ. ನಾರಾಯಣಸ್ವಾಮಿ**
ಸರ್ಕಾರದ ಅಧೀನ ಕಾರ್ಯದರ್ಶಿ
ನಗರಾಭಿವೃದ್ಧಿ ಇಲಾಖೆ

**ಒಳಾಡಳಿತ ಸಚಿವಾಲಯ**

**ವಿಷಯ :** ಶ್ರೀ ನಾಗರಾಜು, ಸಹಾಯಕ ಅಭಿಯೋಗ ನಿರ್ದೇಶಕರು, ಆರಕ್ಷಕ ಅಧೀಕ್ಷಕರವರ ಕಛೇರಿ, ಮಡಿಕೇರಿ (ಪ್ರಭಾರ ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, ಪ್ರಿನ್ಸಿಪಾಲ್ ಜೆ.ಎಂ.ಎಫ್.ಸಿ ನ್ಯಾಯಾಲಯ, ಮಡಿಕೇರಿ) ಇವರನ್ನು ಸೇವೆಯಿಂದ ಅಮಾನತ್ತಿನಲ್ಲಿಡುವ ಬಗ್ಗೆ.

**ಓದಲಾಗಿದೆ:** 1. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ: ಡಿಪಿಎನ್.ಸಿಶಾ1:18:2010–11 ದಿನಾಂಕ: 03–05–2010.

2. ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂ.ಲೋಕ್/ಐಎನ್‌ವಿ(ಜಿ)/ಎಂ–20/ಸಿಆರ್–01/2010/ಮಡಿಕೇರಿ ದಿನಾಂಕ: 13–05–2010.

**ಪ್ರಸ್ತಾವನೆ:**

ಮೇಲೆ (1)ರ ಓದಲಾದ ದಿನಾಂಕ: 03–05–2010ರ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರವರ ಪತ್ರ ಮತ್ತು ಮೇಲೆ (2)ರಲ್ಲಿ ದಿನಾಂಕ: 13–05–2010ರ ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರಗಳಲ್ಲಿ ಮಡಿಕೇರಿ ಲೋಕಾಯುಕ್ತ ಪೊಲೀಸ್ ಠಾಣೆ ಮೊಕದ್ದಮೆ ಸಂಖ್ಯೆ: 1/2010ರ ಪ್ರಕರಣದಲ್ಲಿ ಆರೋಪಿಯಾಗಿರುವ ಶ್ರೀ ನಾಗರಾಜು, ಸಹಾಯಕ ಅಭಿಯೋಗ ನಿರ್ದೇಶಕರು, ಆರಕ್ಷಕ ಅಧೀಕ್ಷಕರವರ ಕಛೇರಿ, ಮಡಿಕೇರಿ ಇವರು ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, ಪ್ರಿನ್ಸಿಪಾಲ್ ಜೆ.ಎಂ.ಎಫ್.ಸಿ. ನ್ಯಾಯಾಲಯ, ಮಡಿಕೇರಿ ಇಲ್ಲಿ ಪ್ರಭಾರ ರೀತ್ಯ ಕಾರ್ಯ ನಿರ್ವಹಿಸುತ್ತಿದ್ದಾಗ ದಿನಾಂಕ: 22–04–2010 ರಂದು ಮಡಿಕೇರಿಯ ಸಿವಿಲ್ ನ್ಯಾಯಾಲಯದ ಸಿ.ಸಿ.ನಂ. 1794/2007ರಲ್ಲಿ ದಾಖಲಾದ ಪ್ರಕರಣದ ಫಿರ್ಯಾದುದಾರರಾದ ಶ್ರೀ ಪಿ.ಟಿ. ಪೂಣಾಚ್ಚ ಬಿನ್ ಲೇಟ್ ಪಿ.ಕೆ. ತಿಮ್ಮಯ್ಯ, ಪಾಲಂಗಾಲ ಗ್ರಾಮ, ಕರಡ ಅಂಚೆ, ವಿರಾಜಪೇಟೆ ತಾಲ್ಲೂಕು, ಕೊಡಗು ಜಿಲ್ಲೆ ಇವರಿಂದ ರೂ. 3,000/– ಲಂಚವನ್ನು ಪಡೆಯುತ್ತಿದ್ದಾಗ ಮಡಿಕೇರಿ ಲೋಕಾಯುಕ್ತ ಪೊಲೀಸರ ಬಲೆಗೆ ಸಿಕ್ಕಿರಿವುದಾಗಿ ತಿಳಿಸಿರುತ್ತಾರೆ.

ಸದರಿ ಆರೋಪಿತ ಸರ್ಕಾರಿ ಅಧಿಕಾರಿಯವರ ಮೇಲೆ ಸದರಿ ಲೋಕಾಯುಕ್ತ ಪೊಲೀಸರು ಗುನ್ನೆ ನಂ.1/2010. ಕಲಂ 7, 13(1)(ಡಿ) ಸಹವಾಚಕ 13(2) ಭ್ರಷ್ಟಾಚಾರ ನಿರೋಧ ಕಾಯಿದೆ 1988ರ ಅಡಿಯಲ್ಲಿ ಪ್ರಕರಣವನ್ನು ದಾಖಲಿಸಿಕೊಂಡು, ಸದರಿ ಅಧಿಕಾರಿಯನ್ನು ದಸ್ತಗಿರಿ ಮಾಡಿ ತನಿಖೆ ನಡೆಸುತ್ತಿರುವುದಾಗಿ ತಿಳಿಸಿರುತ್ತಾರೆ. ಆದಕಾರಣ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರ ನಿಯಮ 10(1)(ಎ)ರ ರೀತ್ಯಾ ಇಲಾಖಾ ವಿಚಾರಣೆಯನ್ನು ಬಾಕಿ ಇರಿಸಿ ದಿನಾಂಕ: 22–04–2010 ರಿಂದ ಜಾರಿಗೆ ಬರುವಂತೆ ಅಮಾನತ್ತಿನಲ್ಲಿಟ್ಟು ಆದೇಶ ಹೊರಡಿಸುವಂತೆ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ನಿರ್ದೇಶಕರು ಕೋರಿರುತ್ತಾರೆ.

ವಿಷಯವನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ ಒಇ 131 ಪಿಪಿಇ 2010, ಬೆಂಗಳೂರು, ದಿನಾಂಕ 22ನೇ ಮೇ 2010.**

ಮೇಲೆ ವಿವರಿಸಿರುವಂತೆ, ಶ್ರೀ ನಾಗರಾಜು, ಸಹಾಯಕ ಅಭಿಯೋಗ ನಿರ್ದೇಶಕರು, ಆರಕ್ಷಕ ಅಧೀಕ್ಷಕರವರ ಕಛೇರಿ, ಮಡಿಕೇರಿ (ಪ್ರಭಾರ ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, ಪ್ರಿನ್ಸಿಪಾಲ್ ಜೆ.ಎಂ.ಎಫ್.ಸಿ ನ್ಯಾಯಾಲಯ, ಮಡಿಕೇರಿ) ಇವರನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರ ನಿಯಮ 10(1)(ಎ)ರ ಅನುಸಾರ ಇಲಾಖಾ ವಿಚಾರಣೆಯನ್ನು ಬಾಕಿ ಇರಿಸಿ ದಿನಾಂಕ: 22–04–2010 ರಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ಅಮಾನತ್ತಿನಲ್ಲಿರಿಸಿದೆ.

ಸದರಿ ಅಧಿಕಾರಿಯವರು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ ನಿಯಮ 98ರ ಅನುಸಾರ ಅಮಾನತ್ತಿನ ಅವಧಿಯಲ್ಲಿ ಜೀವನಾಧಾರ ಭತ್ಯೆಯನ್ನು ಪಡೆಯಲು ಅರ್ಹರಾಗಿರುತ್ತಾರೆ.

ಅಮಾನತ್ತಿನ ಅವಧಿಯಲ್ಲಿ ಸದರಿ ಅಧಿಕಾರಿಯು ನೇಮಕಾತಿ ಪ್ರಾಧಿಕಾರಿ/ಮೇಲಾಧಿಕಾರಿಯ ಪೂರ್ವಾನುಮತಿಯನ್ನು ಪಡೆಯದೇ ಕೇಂದ್ರ ಸ್ಥಾನವನ್ನು ಬಿಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ.ಸಿ. ಸಿದ್ದಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ

(ಕಾನೂನು ಮತ್ತು ಸುವ್ಯವಸ್ಥೆ ಕಾಫಿಪೋಸಾ ಮತ್ತು ಅಭಿಯೋಗಗಳು)

ಪಿ.ಆರ್. 1323

## ಇಂಧನ ಸಚಿವಾಲಯ

**ವಿಷಯ :** ಮೆ. ಕಪಿಲ ಮಂಜುಶ್ರೀ ಕಂಪನಿಯ ಹೆಸರನ್ನು M/s Kapila Manjushree Apparels Private Limited ಎಂದು ಬದಲಾಯಿಸಿ ಇವರಿಗೆ ಹಂಚಿಕೆಯಾಗಿರುವ ಕಿರು ಜಲ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 4.00 ಮೆಗಾ ವ್ಯಾಟ್‌ನಿಂದ 9.00 ಮೆಗಾ ವ್ಯಾಟ್‌ಗೆ ಹೆಚ್ಚಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ: ಇಎನ್ 453 ಎನ್‌ಸಿಇ 2009, ದಿನಾಂಕ: 30–04–2010.

**2) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರಗಳ ಸಂಖ್ಯೆ: ಕೆಆರ್‌ಇಡಿ/06/ಕೋಟೆಮಲೆ ಕಿ.ಜ.ವಿ./2010/1347 ದಿನಾಂಕ: 18–05–2010 ಮತ್ತು ಸಂಖ್ಯೆ: ಕೆಆರ್‌ಇಡಿ/06/ಕೋಟೆಮಲೆ ಕಿ.ಜ.ವಿ/2010/1364 ದಿನಾಂಕ: 19–05–2010.**

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿ ಮೆ.. ಕಪಿಲ ಮಂಜುಶ್ರೀ ಇವರಿಗೆ ಕೊಡಗು ಜಿಲ್ಲೆಯ ಮಡಿಕೇರಿ ತಾಲ್ಲೂಕಿನ ತಣ್ಣಿಮನಿ ಗ್ರಾಮದ ಬಳಿ ಭಾಗಮಂಡಲ ಪಟ್ಟಣದ ಕೋಟೆಮಲೆ ಎಸ್ಟೇಟಿನ ಮುಖಾಂತರ ಹರಿಯುವ 3 ತೊರೆಗಳಿಗೆ ಅಡ್ಡಲಾಗಿ 4.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಕೆಲವೊಂದು ನಿಬಂಧನೆಗಳಿಗೊಳಪಟ್ಟು ಹಂಚಿಕೆ ಮಾಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಪತ್ರಗಳಲ್ಲಿ, ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಸರ್ಕಾರಿ ಆದೇಶ ಸಂಖ್ಯೆ: ಇಎನ್ 453 ಎನ್‌ಸಿಇ 2009, ದಿನಾಂಕ: 30–04–2010ರಲ್ಲಿ ಸಂಸ್ಥೆಯ ಹೆಸರನ್ನು ಮೆ.. ಕಪಿಲ ಮಂಜುಶ್ರೀ ಎಂದು ನಮೂದಿಸಲಾಗಿದ್ದು, ವಾಸ್ತವವಾಗಿ ಸಂಸ್ಥೆಯ ಹೆಸರು M/s Kapila Manjushree Apparels Private Limited ಎಂಬುದಾಗಿ ಇರುವುದರಿಂದ, ಸರ್ಕಾರದ ಆದೇಶದಲ್ಲಿ ಸಂಸ್ಥೆಯ ಹೆಸರನ್ನು M/s Kaplila Manjushree Apparels Private Limited ಎಂದು ತಿದ್ದುಪಡಿ ಮಾಡಬೇಕೆಂದು ಕೋರಿದ್ದಾರೆ. ಅಲ್ಲದೆ, ಉದ್ದೇಶಿತ ಯೋಜನೆಯನ್ನು ಅನುಷ್ಠಾನಗೊಳಿಸಲು ಆಯ್ಕೆ ಮಾಡಿರುವ ಸ್ಥಳವು ಸ್ವಂತ ಜಮೀನಾಗಿದ್ದು, 4.00 ಮೆಗಾ ವ್ಯಾಟ್ ಬದಲಿಗೆ 9.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರುಜಲ ವಿದ್ಯುತ್ ಯೋಜನೆಯನ್ನು ಸ್ಥಾಪಿಸಲು ಅವಕಾಶವಿದೆ ಎಂದು ತಿಳಿಸಿದ್ದಾರೆ. ಈ ಸಂಬಂಧ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಇವರಿಗೆ ಅಭಿವೃದ್ಧಿದಾರರು ಯೋಜನಾ ವರದಿಯನ್ನು ಸಲ್ಲಿಸಿದ್ದಾರೆಂದು ವರದಿ ಮಾಡುತ್ತಾ, M/s Kapila Manjushree Apparels Private Limited ಇವರಿಗೆ ಹಂಚಿಕೆಯಾಗಿರುವ ಕಿರುಜಲ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 4.00 ಮೆಗಾ ವ್ಯಾಟ್‌ನಿಂದ 9.00 ವ್ಯಾಟ್ ಸಾಮರ್ಥ್ಯಕ್ಕೆ ಹೆಚ್ಚಿಸಲು ಶಿಫಾರಸ್ಸು ಮಾಡಿರುತ್ತಾರೆ.

ಆದುದರಿಂದ ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 453 ಎನಸಿಇ 2009, ಬೆಂಗಳೂರು, ದಿನಾಂಕ: 20–05–2010.**

ಪ್ರಸ್ತಾವನೆಯಲ್ಲಿ ವಿವರಿಸಲಾಗಿರುವ ಸನ್ನಿವೇಶನಗಳ ಹಿನ್ನೆಲೆಯಲ್ಲಿ, ಮೆ.. ಕಪಿಲ ಮಂಜುಶ್ರೀ ಎಂಬ ಕಂಪನಿಯ ಹೆಸರನ್ನು M/s Kapila Manjushree Apparels Private Limited ಎಂದು ಬದಲಾಯಿಸಿದೆ ಹಾಗೂ ಈ ಕಂಪನಿಗೆ ಕೊಡಗು ಜಿಲ್ಲೆಯ ಮಡಿಕೇರಿ ತಾಲ್ಲೂಕಿನ ತಣ್ಣಿಮನಿ ಗ್ರಾಮದ ಬಳಿ ಭಾಗಮಂಡಲ ಪಟ್ಟಣದ ಕೋಟೆಮಲೆ ಎಸ್ಟೇಟಿನ ಮುಖಾಂತರ ಹರಿಯುವ 3 ತೊರೆಗಳಿಗೆ ಅಡ್ಡಲಾಗಿ ಹಂಚಿಕೆ ಮಾಡಿರುವ 4.00 ಮೆಗಾ ವ್ಯಾಟ್ ಸಾಮರ್ಥ್ಯದ ಕೋಟೆಮಲೆ ಕಿರು ಜಲ ವಿದ್ಯುತ್ ಯೋಜನೆಯನ್ನು 9.00 ಮೆಗಾ ವ್ಯಾಟ್ ಸಾಮರ್ಥ್ಯಕ್ಕೆ ಹೆಚ್ಚಿಸಿ ಅನುಷ್ಠಾನ ಮಾಡಲು ಅನುಮತಿಯನ್ನು ನೀಡಲಾಗಿದೆ.

ಸರ್ಕಾರದ ಆದೇಶ ಸಂಖ್ಯೆ: ಇಎನ್ 453 ಎನ್‌ಸಿಇ 2009, ದಿನಾಂಕ: 30–04–2010ರ ಇತರೆ ನಿಬಂಧನೆಗಳು ಯಥಾವತ್ತಾಗಿ ಮುಂದುವರಿಯುತ್ತವೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1324

**ಎಸ್.ಜೆ. ಸಂಪತ್ ಕುಮಾರ್**
ಸರ್ಕಾರದ ಅಧೀನ ಕಾರ್ಯದರ್ಶಿ
ಇಂಧನ ಇಲಾಖೆ

**ಕಂದಾಯ ಸಚಿವಾಲಯ**

**ವಿಷಯ :** ಶ್ರೀ ಎಸ್.ಆರ್. ಪಾಟೀಲ್, ಹಿಂದಿನ ತಹಶೀಲ್ದಾರ್, ಗಂಗಾವತಿ ತಾಲ್ಲೂಕು, ಪ್ರಸ್ತುತ ತಹಶೀಲ್ದಾರ್, ಸೇಡಂ ತಾಲ್ಲೂಕು, ಗುಲ್ಬರ್ಗಾ ಜಿಲ್ಲೆ ಇವರ ವಿರುದ್ಧ ಇಲಾಖಾ ವಿಚಾರಣೆ ಜರುಗಿಸುವ ಕುರಿತು.

**ಓದಲಾಗಿದೆ:** (1) ಜಿಲ್ಲಾಧಿಕಾರಿಗಳು, ಕೊಪ್ಪಳ ಜಿಲ್ಲೆ, ಕೊಪ್ಪಳ ಇವರ ಪತ್ರದ ಸಂಖ್ಯೆ: ಸಿಬ್ಬಂದಿ–1/ಸಿಸಿಎ/2004–05/863, ದಿನಾಂಕ: 03–06–2004.

**(2) ದಿನಾಂಕ: 25–10–04ರ ಕಾರಣ ಕೇಳುವ ನೋಟೀಸ್ ಸಂ.: ಆರ್‌ಡಿ 29 ಎಡಿಇ 2004.**

**(3) ಶ್ರೀ ಎಸ್.ಆರ್. ಪಾಟೀಲ್ ಇವರ ದಿನಾಂಕ: 06–11–2004ರ ಲಿಖಿತ ಸಮಜಾಯಿಷಿ.**

**(4) ಸರ್ಕಾರದ ಆದೇಶ ಸಂ.: ಆರ್‌ಡಿ 29 ಎಡಿಇ 2004, ದಿನಾಂಕ: 09–05–2005.**

**ಪ್ರಸ್ತಾವನೆ:**

ಶ್ರೀ ಎಸ್.ಆರ್. ಪಾಟೀಲ್, ಇವರು ಹಿಂದೆ ಗಂಗಾವತಿ ತಾಲ್ಲೂಕು ತಹಶೀಲ್ದಾರ್‌ರಾಗಿ ಕಾರ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ಚುನಾವಣಾ ಕೆಲಸದಲ್ಲಿ ಆಸಕ್ತಿ ವಹಿಸದೆ, ದಿನಾಂಕ: 11–04–2004ರ ಮಧ್ಯಾಹ್ನ ಗೈರು ಹಾಜರಾಗಿದ್ದು, ಚುನಾವಣಾ ಕೆಲಸಕ್ಕೆ ನಿಯೋಜಿಸಬೇಕಾದ ಸಿಬ್ಬಂದಿಯ ತರಬೇತಿಗಾಗಿ ಯಾವ ಪೂರ್ವ ಸಿದ್ಧತೆಗಳನ್ನು ಮಾಡಿಕೊಂಡಿರದೆ ಹಾಗೂ ಎಲೆಕ್ಟ್ರಾನಿಕ್ ಮತ ಯಂತ್ರಗಳ ತೃಪ್ತಿಕರ ಕಾರ್ಯ ನಿರ್ವಹಣೆ ಬಗ್ಗೆ ಅವುಗಳನ್ನು ಪರೀಕ್ಷಿಸದೆ ಸರಿಪಡಿಸುವ ಕೆಲಸ ನಡೆಯುತ್ತಿರುವಾಗ ಸಮಯಕ್ಕೆ ಸರಿಯಾಗಿ ಹಾಜರಾಗದೆ, ಹಾಗೂ ಚುನಾವಣೆಯ ದಿನ ಹಾಗೂ ಚುನಾವಣೆಯ ಮರುದಿನ ಅಂದರೆ ದಿನಾಂಕ: 20–04–2004 ಹಾಗೂ 21–04–2004ರಂದು ಚುನಾವಣಾ ಕೆಲಸಕ್ಕೆ ಗೈರು ಹಾಜರಾಗಿ ಚುನಾವಣಾ ಕಾರ್ಯ ನಿರ್ವಹಿಸುವಲ್ಲಿ ನಿರ್ಲಕ್ಷತೆ ತೋರಿ ಕರ್ತವ್ಯ ಲೋಪ ಎಸಗಿದ್ದು, ಸದರಿ ಅಧಿಕಾರಿಯವರ ವಿರುದ್ಧ ಇಲಾಖಾ ವಿಚಾರಣೆ ಜರುಗಿಸುವಂತೆ ಮೇಲೆ ಕ್ರ.ಸಂ. (1)ರಲ್ಲಿ ಓದಲಾದ ದಿನಾಂಕ: 03–06–2004ರ ಪತ್ರದಲ್ಲಿ ಕೊಪ್ಪಳ ಜಿಲ್ಲಾಧಿಕಾರಿಗಳು ಕೋರಿರುತ್ತಾರೆ.

1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳ ನಿಯಮ 11ರ ಮೇರೆಗೆ ಮೇಲ್ಕಂಡ ಆರೋಪಗಳ ಬಗ್ಗೆ ಆರೋಪಿತರ ವಿರುದ್ಧ ಆರೋಪ ಪಟ್ಟಿಗಳನ್ನು (ಅನುಬಂಧ–1 ರಿಂದ 4ರವರೆಗೆ) ಜಾರಿ ಮಾಡಿ ಸದರಿ ಆರೋಪಗಳ ಬಗ್ಗೆ ಲಿಖಿತ ಹೇಳಿಕೆಗಳನ್ನು ಸಲ್ಲಿಸಲು ಮೇಲೆ ಕ್ರ.ಸಂ. (2)ರಲ್ಲಿ ಓದಲಾದ ದಿನಾಂಕ: 25–10–2004 ರಂದು ತಿಳುವಳಿಕೆ ಪತ್ರವನ್ನು ಜಾರಿಗೊಳಿಸಲಾಗಿತ್ತು. ಸದರಿ ತಿಳುವಳಿಕೆ ಪತ್ರಕ್ಕೆ ಅನುಗುಣವಾಗಿ ಶ್ರೀ ಎಸ್.ಆರ್. ಪಾಟೀಲ್‌ರವರು ಮೇಲೆ ಕ್ರ.ಸಂ. (3)ರಲ್ಲಿ ಓದಲಾದ ದಿನಾಂಕ: 06–11–2004 ರಂದು ಲಿಖಿತ ಹೇಳಿಕೆಯನ್ನು ಸಲ್ಲಿಸಿ, ಅವರ ವಿರುದ್ಧದ ಎಲ್ಲಾ ಆರೋಪಗಳು ಸತ್ಯಕ್ಕೆ ದೂರವಾಗಿರುತ್ತದೆಯಂದು ತಿಳಿಸಿ ಆ ಆರೋಪಗಳನ್ನು ಅಲ್ಲಗೆಳೆದಿರುತ್ತಾರೆ ಹಾಗೂ ಸದರಿ ಆರೋಪಗಳಿಂದ ಕೈಬಿಡುವಂತೆ ಕೋರಿರುತ್ತಾರೆ.

ಆರೋಪಿತರ ವಿರುದ್ಧದ ಆರೋಪಗಳು ಹಾಗೂ ಅವರು ಸಲ್ಲಿಸಿದ ಲಿಖಿತ ಹೇಳಿಕೆಯನ್ನು ಪರಿಶೀಲಿಸಿದ ಸರ್ಕಾರವು ಈ ಪ್ರಕರಣದ ಸತ್ಯಾಸತ್ಯತೆಯನ್ನು ಕಂಡುಕೊಳ್ಳಲು ನಿರ್ಧರಿಸಿ ಅವರ ವಿರುದ್ಧ ಇಲಾಖಾ ವಿಚಾರಣೆ ಜರುಗಿಸಲು ಮೇಲೆ ಓದಲಾದ ಕ್ರ.ಸಂ. (4)ರ ಆದೇಶದಲ್ಲಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳ ನಿಯಮ 11 ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎಸ್.ಆರ್. ಪಾಟೀಲ್, ಹಿಂದಿನ ತಹಶೀಲ್ದಾರ್, ಗಂಗಾವತಿ ತಾಲ್ಲೂಕು, ಪ್ರಸ್ತುತ ತಹಶೀಲ್ದಾರ್, ಸೇಡಂ ತಾಲ್ಲೂಕು, ಗುಲ್ಬರ್ಗಾ ಜಿಲ್ಲೆ ಇವರ ವಿರುದ್ಧ ಆರೋಪಗಳ ಬಗ್ಗೆ ಇಲಾಖಾ ವಿಚಾರಣೆ ಜರುಗಿಸಲು ಶ್ರೀ ಕುಲಕರ್ಣಿ ರಾಮರಾವ್, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು ತುರುವಿಹಾಳ್ ಪೋಸ್ಟ್, ಸಿಂಧನೂರು ತಾಲ್ಲೂಕು, ರಾಯಚೂರು ಜಿಲ್ಲೆ ಇವರನ್ನು ವಿಚಾರಣಾಧಿಕಾರಿಯನ್ನಾಗಿ ಹಾಗೂ ಕೊಪ್ಪಳ ಜಿಲ್ಲಾಧಿಕಾರಿಗಳ ಕಛೇರಿಯ ಕೇಂದ್ರಾಸ್ಥಾನಿಕ ಸಹಾಯಕರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಲಾಗಿತ್ತು.

ಶ್ರೀ ಕುಲಕರ್ಣಿ ರಾಮರಾವ್, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು ಇವರು ಅನಾರೋಗ್ಯದಿಂದ ಬಳಲುತ್ತಿರುವುದಾಗಿ ಹಾಗೂ, ಇಲಾಖಾ ವಿಚಾರಣೆ ನಡೆಸಲು ಸಾಧ್ಯವಾಗುವುದಿಲ್ಲವೆಂದು ತಿಳಿಸುತ್ತಾ, ಈ ಬಗ್ಗೆ ಬೇರೆ ವ್ಯವಸ್ಥೆ ಮಾಡಿಕೊಳ್ಳಲು ಕೋರಿರುತ್ತಾರೆ. ಈ ಬಗ್ಗೆ ಸರ್ಕಾರವು ಪರಿಶೀಲಿಸಿ, ಸದರಿಯವರ ಬದಲಿಗೆ ಶ್ರೀ ಫ.ನಿ. ಗುಡ್ಡಾಕಾರ, ನಿವೃತ್ತ ಜಿಲ್ಲಾ ಸತ್ರ ನ್ಯಾಯಾಧೀಶರು, ಗಣಪತಿ ಗುಡಿ ಹತ್ತಿರ, ಸಂಗೊಳ್ಳಿ ರಾಯಣ್ಣ ನಗರ, ಧಾರವಾಡ–580002 ಇವರನ್ನು ವಿಚಾರಣಾಧಿಕಾರಿಯನ್ನಾಗಿ ಹಾಗೂ ತಹಶೀಲ್ದಾರ್, ಗಂಗಾವತಿ ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಲು ತೀರ್ಮಾನಿಸಿದೆ. ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂ.: ಆರ್‌ಡಿ 29 ಎಡಿಇ 2004, ಬೆಂಗಳೂರು, ದಿನಾಂಕ: 07–05–2010.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ, 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಾವಳಿಗಳ ನಿಯಮ 11 ರಡಿಯಲ್ಲಿ ಪ್ರದತ್ತವಾದ ಅಧಿಕಾರಿಯನ್ನು ಚಲಾಯಿಸಿ, ಶ್ರೀ ಕುಲಕರ್ಣಿ ರಾಮರಾವ್, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಇವರ ಬದಲಿಗೆ ಶ್ರೀ ಫ.ನಿ. ಗುಡ್ಡಾಕಾರ, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಗಣಪತಿ ಗುಡಿ ಹತ್ತಿರ, ಸಂಗೊಳ್ಳಿ ರಾಯಣ್ಣ ನಗರ, ಧಾರವಾಡ–580002 ಇವರನ್ನು ವಿಚಾರಣಾಧಿಕರಿಯನ್ನಾಗಿ ನೇಮಿಸಿದೆ.

ಶಿಸ್ತು ಪ್ರಾಧಿಕಾರದ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 11(5)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ತಹಶೀಲ್ದಾರ್, ಗಂಗಾವತಿ ತಾಲ್ಲೂಕು, ಕೊಪ್ಪಳ ಜಿಲ್ಲೆ ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿದೆ.

ವಿಚಾರಣಾಧಿಕಾರಿಗಳು ವಿಚಾರಣೆಯನ್ನು ಧಾರವಾಡ ಜಿಲ್ಲಾಧಿಕಾರಿಗಳ ಕಛೇರಿಯ ಆವರಣದಲ್ಲಿ ಅಥವಾ ಅವರು ಗುರುತಿಸಿ ನಿಗಡಿಪಡಿಸಿ ಸ್ಥಳದಲ್ಲಿ ಇಲಾಖಾ ವಿಚಾರಣೆಯನ್ನು ನಡೆಸತಕ್ಕದ್ದು. ಈ ಉದ್ದೇಶಕ್ಕಾಗಿ ಲಭ್ಯವಿರುವ ಕಛೇರಿಗಳಲ್ಲಿ ವಿಚಾರಣಾಧಿಕಾರಿಗಳಿಗೆ ಸ್ಥಳಾವಕಾಶವನ್ನು ಮಾಡುವುದು ಹಾಗೂ ಸಂಬಂಧಿಸಿದ ಕಛೇರಿಯಲ್ಲಿ ಲಭ್ಯವಿರುವ ಶೀಘ್ರಲಿಪಿಗಾರರ/ಬೆರಳಚ್ಚುಗಾರರ ಸಹಾಯವನ್ನು ಹಾಗೂ ಲೇಖನ ಸಾಮಗ್ರಿಗಳನ್ನು ಒದಗಿಸತಕ್ಕದ್ದು.

ಈ ಪ್ರಕರಣದ ವಿಚಾರಣೆಯನ್ನು ನಡೆಸಲು, ಸಿಆಸು ಇಲಾಖೆಯ ಟಿಪ್ಪಣಿ ಸಂ.: ಸಿಆಸುಇ 33 ಕೆಇವಿ 2008, ದಿನಾಂಕ: 12–06–2008ರಲ್ಲಿ ಸಹಮತಿಸಿದೆ. ಈ ಪ್ರಕರಣದ ವಿಚಾರಣೆಗಾಗಿ ವಿಚಾರಣಾಧಿಕಾರಿಗಳಿಗೆ ಸರ್ಕಾರಿ ಆದೇಶ ಸಂ.: ಸಿಆಸುಇ 22 ಸೇಇವಿ 2007, ದಿನಾಂಕ: 11–04–2008ರನ್ವಯ ರೂ. 8,000/– (ಎಂಟು ಸಾವಿರ ರೂಪಾಯಿಗಳು ಮಾತ್ರ) ಗಳ ಸಂಚಿತ ಸಂಭಾವನೆಯನ್ನು ಹಾಗೂ ರೂ. 1,500/– (ಒಂದು ಸಾವಿರದ ಐದುನೂರು ರೂಪಾಯಿಗಳು ಮಾತ್ರ)ಗಳ ವಾಹನ ಭತ್ಯೆ (ಕನ್ವೇಯನ್ಸ್ ಅಲೋಯನ್ಸ್)ಯನ್ನು ವಿಚಾರಣಾಧಿಕಾರಿಗಳು ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿದ ನಂತರ ಜಿಲ್ಲಾಧಿಕಾರಿಗಳು, ಕೊಪ್ಪಳ ಜಿಲ್ಲೆ ಇವರು ಪಾವತಿ ಮಾಡತಕ್ಕದ್ದು.

ವಿಚಾರಣಾಧಿಕಾರಿಗಳು ಮೇಲ್ಕಂಡ ನಿಯಮಗಳ ನಿಯಮ 11 ಮತ್ತು 11(ಎ)ರಲ್ಲಿನ ವಿಧಿ ವಿಧಾನಗಳನ್ನು ಅನುಸರಿಸಿ, ಜರುಗಿಸಿ ವಿಚಾರಣಾ ವರದಿಯನ್ನು ಎರಡು ತಿಂಗಳೊಳಗಾಗಿ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1325

**ಎಸ್.ಬಿ. ಸಸಾಲಟ್ಟಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಸೇವೆಗಳು–3)

## ಇಂಧನ ಸಚಿವಾಲಯ

**ವಿಷಯ :** M/s Suzlon Infrastructure Services Limited ಇವರಿಗೆ 250.00 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆ ಹಂಚಿಕೆ ಬಗ್ಗೆ.

**ಓದಲಾಗಿದೆ:**

1. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/08/ಎಸ್‌ಆರ್‌ಎಲ್–ವಿಒಎಲ್–IV/2009/1176 ದಿನಾಂಕ: 6/9–03–2009.
2. ದಿನಾಂಕ: 23–10–2009 ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.
3. ಸರ್ಕಾರ ಪತ್ರ ಸಂಖ್ಯೆ: ಇಎನ್ 204 ಎನ್‌ಸಿಇ 2009 ದಿನಾಂಕ: 05–12–2009.
4. ಕರ್ನಾಟಕ ನವೀಕರಿಸಬಹುದಾದ ಇಂಧನ ಆಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರಗಳ ಸಂಖ್ಯೆ: ಕೆಆರ್‌ಇಡಿ/08/ಎಸ್‌ಐಎಸ್‌ಎಲ್/2009/3815 ದಿನಾಂಕ: 19/21–11–2009 ಮತ್ತು ಸಂಖ್ಯೆ: ಕೆಆರ್‌ಇಡಿ/08/ಎಸ್‌ಐಎಸ್‌ಎಲ್/2010/113 ದಿನಾಂಕ: 12/15–01–2010.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು M/s Sarjan Realities Ltd. ಇವರಿಗೆ ರಾಜ್ಯದ ವಿವಿಧ ಜಿಲ್ಲೆಗಳಲ್ಲಿ ಒಟ್ಟು 972.85 ಮೆಗಾ ವ್ಯಾಟ್

ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಹಂಚಿಕೆ ಸಮಿತಿ ಸಭೆಯ ಮುಂದೆ ಸದರಿ ಪ್ರಸ್ತಾವನೆಯನ್ನು ಮಂಡಿಸಲಾಗಿತ್ತು. ಸಮಿತಿಯ ನಿರ್ಣಯವು ಈ ಕೆಳಗಿನಂತಿರುತ್ತದೆ:–

"M/s. Sarjan Realities Limited – (972.86 MW)

M/s. Sarjan Realities Limited is a sister company of M/s. Suzlon Energy Limited. The Committee noted that 1600 MW is the balance of allotment made to be developed by M/s. Suzlon and its sister companies. Noted that this year's target was 150 MW.

The consensus was to allot 250 MW out of the request for 972.85 MW, in the Districts of Bagalkot, Bijapur, Gulbarga, Koppal, Raichur, Bidar and Tumkur, MD, KREDL was instructed to call M/s. Suzlon for discussions and prepare a plan to commission at least 250 MW before 2010".

ಕ್ರೆಡಲ್‌ನ ವ್ಯವಸ್ಥಾಪಕ ನಿರ್ದೇಶಕರಿಗೆ ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಪತ್ರದಲ್ಲಿ ದಿನಾಂಕ: 23–10–2009ರ ಹಂಚಿಕೆ ಸಮಿತಿಯ ನಿರ್ಣಯದಂತೆ ಅಗತ್ಯ ಕ್ರಮ ತೆಗೆದುಕೊಳ್ಳುವಂತೆ ಸೂಚಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (4)ರ ಪತ್ರಗಳಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕ್ರೆಡಲ್ ಇವರು M/s Sarjan Realities Limited ಇವರ ಉದ್ದೇಶಿತ 972.85 ಮೆಗಾ ವ್ಯಾಟ್ ಸಾಮಥ್ಯದ ಪವನ ವಿದ್ಯುತ್ ಯೋಜನೆಯನ್ನು 250 ಮೆಗಾ ವ್ಯಾಟ್ ಸಾಮರ್ಥ್ಯಕ್ಕೆ ಸೀಮಿತಗೊಳಿಸಿ, ಹಂಚಿಕೆ ಆದೇಶವನ್ನು M/s Sarjan Realities Limited ಹೆಸರಿನ ಬದಲಾಗಿ M/s Suzlon Infrastructure Service Limited ಹೆಸರಿನಲ್ಲಿ ನೀಡಬೇಕೆಂದು ಶಿಫಾರಸ್ಸು ಮಾಡಿ ಮಾರ್ಪಡಿಸಿರುವ ಯೋಜನಾ ನಕ್ಷೆಯೊಂದಿಗೆ ಮರು ಪ್ರಸ್ತಾವನೆಯನ್ನು ಸರ್ಕಾರಕ್ಕೆ ಕಳುಹಿಸಿಕೊಟ್ಟಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಕಂಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರಿ ಆದೇಶ ಸಂ.: ಇಎನ್ 204 ಎನ್‌ಸಿಇ 2009, ಬೆಂಗಳೂರು, ದಿನಾಂಕ: 20–05–2010.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ, M/s Suzlon Infrastructure Services Limited ಇವರಿಗೆ ರಾಯಚೂರು, ಬಳ್ಳಾರಿ, ಬಿಜಾಪುರ, ಗುಲ್ಬರ್ಗಾ ಮತ್ತು ಹಾವೇರಿ ಜಿಲ್ಲೆಗಳಲ್ಲಿ ಒಟ್ಟು 250.2 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಈ ಕೆಳಗೆ ವಿವರಿಸಿರುವಂತೆ ಈ ಆದೇಶದಲ್ಲಿನ ನಿಬಂಧನೆಗೊಳಪಟ್ಟು ಹಂಚಿಕೆ ಮಾಡಿದೆ:–

| Sl. No. | Topo Sheet No. | Proposed capacity in MW | Near by villages of the proposed area and district | Geographical area description of the project |
|---|---|---|---|---|
| 1 | 57 A/5 | 4.2 MW | Gudadur<br>Raichur District | It is a plain area with no significant orientation located on the NE of Hiremanapura & spread around Gudadur village. It appears to be agriculture lands and is covered in the following geographical co-ordinates: Latitude: 15°46°11"- 15°49'49" N<br>Longitude: 76°16'39"-76°20'33"E<br>Ridge peaks: 683, 690,647,659,644 & 651 Amsl. |
| 2 | 57 A/2<br>57 A/3<br>57 A/6 &<br>57 A/7 | 22.8 MW | Chikamuki,<br>Gasaladoodi,<br>Chamalapura,<br>Irakallaguda &<br>Hire Sulikeri,<br>Arsinakeri,<br>Rampur,<br>Obalabandi,<br>Ramdurga &<br>Mettagal<br>Raichur district. | The nature of the proposed area consists of agriculture activity and the major portion of the area is having number of non-contiguous East West oriented hillocks with open scrub features and are covered in 4 toposheets. They are identified as Part-I, Part-II, Part-III & Part-IV. The number of village and peaks covered in the following Geographical co-ordinates:<br>Latitude: 15°26'44"-15°33'47" N<br>Longitude: 76°12'12" – 76°23'11"3<br>Ridge peaks: 645, 640, 680, 656, 621, 617, 677, 682, 684, 648, 691 & 712 Amsl. |
| 3 | 57 A/6 &<br>57 A/10 | 4.2 MW | Nishi Gudda<br>Raichur district | The proposed area is no high raised plain with predominant orientation in NW-SE directions located on the East of Kottapura. It is also called as Nishani Gudda. The area is covered with Cactus & part of it has open scrub features. It is held in the following geographical co-ordinates:<br>Latitude: 15°37'30"-15°49'45" N<br>Longitude: 76°29'10"-76°31'23" E |

| | | | | |
|---|---|---|---|---|
| | | | | Ridge peaks: 588, 521 & 570 Amsl. |
| 4 | 57 B/9 | 28.2 MW | Nallabanda, Vaddinakatte, Choranura, Jiginihalli, Obalapura, Swamihalli, Sheliyappanahalli, Pakkurthi, Appayyanahalli, Mahadevapur, Nagarahunshi, Bellary district. | The proposed area is of complex in nature and falls in the Reserved Forest Gudikote Sanjeevarayanakote & Thoranur. The part of the area has fairly dense scrub, open scrub and also shows the presence of rocky knobs, boulders and sheet rocks. The entire area is situated in Thoranur Town, Bellary district and is comes under the following Geographical co-ordinates:<br>Latitude: 14$^0$50’16”-14$^0$58’56” N<br>Longitude: 76$^0$30’0” – 76$^0$44’13” E<br>Ridge peaks: 701, 734, 722, 788, 725, 787, 729, 705, 800, 708, 762, 780, 739, 718, 817, 745, 748, 703, 826, 806, 813, 786, 706, 686, 721m Amsl. |
| 5 | 56 D/7 | 37.8 MW | Hulagbal Mavinbhavi, Nagarbetta, Yanniwadgeri, Kodekai, Budihal, Uppaldinni, Hanchnal, Kadarhal, Dyamonal, Malur, Bandeppanhalli, Kolihal, Gundaknal, Talikota, Bijapur (25 MW and Gulbarga-12.8 MW Districts. | A large area is proposed, which is spread across Nalatvadi, Taikoto, Kolilhali, Jomalapur, Narayanapur etc. Further, it is complex in nature & consists of forest and non-forest stony waste, open scrub, graval waste etc and the entire area bisects by a river called Don-R. Further the part of the area is covered in the Thangarbal Reserve Forest, The identified area is having several peaks and is covered in the following Geographical co-ordinates:<br>Latitude: 16$^0$15’0”-16$^0$30’0” N<br>Longitude: 76$^0$15’0”-76$^0$30’0” E<br>Ridge peakes: 538, 644, 516, 513, 505, 495, 516, 524, 509, 496, 493, 532, 528, 523, 528, 545, 550, 563, 557, 519, 525m Amsl. |
| 6 | 57 A/1 & 57 A/5 | 50.40 MW | Yergeri, Kalalbandi, Chalageri, Talageri, Kushtagi, Datihal, Ilkal, Alempurpet, Hire Signagutti, Chik Otgeri, Gumgeri, Gonal, Hire Mannapur, Kandgal, Raichur Districts. | The identified area is spread across 2 topo sheets (57A/1and 57 A/5) the area appears to be general plain with higher elevation and some areas are having rocks and boulders and would be having multiple ownership. Further, it has number of villages & peaks and is covered in the following Geopgraphical co-ordinates:<br>Latitude: 15$^0$45’0”-16$^0$0’0” N<br>Longitude: 76$^0$0’0”-76$^0$20’28” E<br>Ridge peaks: 648, 651, 657, 653, 665, 653, 699, 683, 660, 636, 651, 652, 651, 640, 653, 644, 646, 557, 596, 603, 610, 653, 649, 636, 651, 631, 625, 609, 597, 613, 619m Amsl. |
| 7 | 56 D/11 & 56 D/12 | 15.60 MW | Gonavatala, Guntagola, Ramaroti, Parampur, Gurgunta, Honhalli, Kalapur, Linsugur, Bijapuri Gulbarga | The identified area is covered in 2 topo sheets & situated on South of Krishna river and spread around Parmpura and Honahalli villages. Further, it is situated in the lingasugur reserve forest and is of open scrub type. The identified area is having serval peaks and is covered in the following Geographical co-ordinates:<br>Latitude: 16$^0$10’11”-16$^0$18’28” N<br>Longitude: 76$^0$30’0”-76$^0$37’21” E<br>Ridge peaks: 476, 439, 531, 532, 528, 492, 484, 487, 497, 549, 505 520, 484, 504m Amsl. |
| 8 | 57 A/6 | 34.20 MW | Sidlabhavi, Nagarhal, Bachinhal, Umloti, Katapur, Akalkupi, Hire Khed, Warankhed, Hulihaider, Magnakal, Raichur district. | The proposed area is of cultivable and non cultivable type & has presence of streams and water bodies and roads runs on N-S directions in it the major portion of the area lies in the forest and has open scrub features. Further, it consists of rocks, cactus in the non-cultivable area The identified area is having several peaks and is covered in the following Geographical co-ordinates:<br>Latitude: 15$^0$34’36”-15$^0$’45’0” N<br>Longitude: 76$^0$15’16”-76$^0$29’49” E<br>Ridge peaks: 603, 585, 565, 597, 572, 594, 526, 516, 584, 562, 483, 529, 500, 530, 561, 552, 575, 592, 580m Amsl. |
| 9 | 56 D/8 | 29.40 MW | Nalatvad, Bijjur, Talikota, Anehosur, | The proposed area is of low lying type and a part of it has non cultivable and open scrub type. The area is divided into parts and are located on the N-W and S-E of Krishna river. Further, it has |

| | | | | |
|---|---|---|---|---|
| | | | Gonwatal, Bhupur, Lipperpet, Nagarhal, Purnpet, Mudgal, Nandawadgi, Hirelakkihal, Bijapur Districts. | tributaries and streams connecting to Krishna river. The area would not be wind potential on prima facie. The identified area is having several peaks and is covered in the following Geographical co-ordinates: Latitude: $16^{0}$0'0”-$16^{0}$'15'0” N Longitude: $76^{0}$15'0”-$76^{0}$30'0” E Ridge peaks: 565, 487, 529, 552, 527, 521, 567, 562, 577, 534, 597, 600, 585, 510, 552, 572, 542, 544, 519, 513, 537, 527, 508, 512m Amsl. |
| 10 | 57 A/5 | 20.40 MW | Hire Mannapur, Bennihatti, Mudenur, Jumlapur, Garjanhal, Wirapur, Hire Bhergi, Tawargeri, Nandapur, Raichur District. | The proposed area is a mixture of complex and non complex. The non-complex is of open scrub type and consists of rocks and boulders. The area generally has tributarties and the state highways runs in the 4 directions from tawargeri. The identified area is having several peaks and is covered in the following Geographical co-ordinates: Latitude: $15^{0}$45'0”-$15^{0}$'53'16” N Longitude: $76^{0}$17'14”-$76^{0}$29'43” E Ridge peaks: 622, 640, 603, 607, 589, 582, 591, 565, 562, 527, 501, 520, 525, 546m Amsl. |
| 11 | 48 N/6 & 48 N/10 | 3.00 MW | Agasanahalli, Nandihalli Haveri district. | The proposed area consists of independent NW-SE oriented ridges located on South & Southwest of Byadgi village; each ridges are having peaks and are held in the following geographical co-ordinates: Latitude: $14^{0}$38'3”-$14^{0}$'40'0” N Longitude: $75^{0}$25'0”-$75^{0}$30'15” E Ridge peaks: 684, 670, 664, 696, 666, 661 & 698 Amsl. |
| | Total | 250.2 MW | | |

1. ಈ ಯೋಜನೆಯನ್ನು Financial closure ಸಾಧಿಸಿದ 24 ತಿಂಗಳುಗಳ ಒಳಗಾಗಿ ಪ್ರಾರಂಭ ಮಾಡತಕ್ಕದ್ದು.
2. ಈ ಆದೇಶ ಹೊರಡಿಸಿದ ದಿನಾಂಕದಿಂದ 45 ದಿನಗಳೊಳಗಾಗಿ ಯೋಜನಾಭಿವೃದ್ಧಿದಾರರು ರೂ. 400ರ ಛಾಪಾ ಕಾಗದವಲ್ಲಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳುವುದು. ತಪ್ಪಿದಲ್ಲಿ ಈ ಹಂಚಿಕೆ ಆದೇಶ ತಂತಾನೆ ರದ್ದಾಗಿದೆ ಎಂದು ಭಾವಿಸುವುದು.
3. ಹಂಚಿಕೆದಾರರು ಪೂರ್ತಿ ಒಂದು ಪವನ ವರ್ಷಕ್ಕೆ ಕಡಿಮೆ ಇಲ್ಲದಂತೆ 10 ಮೀಟರ್ ಮತ್ತು ಹಬ್ ಹೈಟ್ ಮಟ್ಟದಲ್ಲಿ ಪವನ ವೇಗದ ಅಳತೆಯನ್ನು ಮಾಡಿಕೊಳ್ಳಬೇಕು. ಅಲ್ಲದೇ ಕಾಲ ಕಾಲಕ್ಕೆ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದಿಂದ ಹೊರಡಿಸತಕ್ಕ ಮಾರ್ಗಸೂಚಿಗಳಿಗನುಗುಣವಾಗಿ ಮೈಕ್ರೋ ಸೈಟಿಂಗ್ ಮಾಡಿರುವ ಅಂಶಗಳನ್ನೊಳಗೊಂಡ ವಿವರವಾದ ಯೋಜನಾ ವರದಿಗಳ 3 ಪ್ರತಿಗಳನ್ನು ತಯಾರಿಸಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಮಂಡಿಸಬೇಕು. ತಾಂತ್ರಿಕ ಅವಶ್ಯಕತೆ ಮತ್ತು ಹೆಚ್ಚಿನ ವಿದ್ಯುತ್ ಉತ್ಪಾದನೆಯನ್ನು ಸೇಫ್‌ನಕ್ಷೆ ಮತ್ತು ವಿಂಡ್ ಫಾರ್ಮನ ಲೇಔಟ್‌ನ ಬದಲಾವಣೆಗನುಗುಣವಾಗಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ಶಿಫಾರಸ್ಸಿನಂತೆ ಇದೆ ಎಂಬುದನ್ನು ಖಾತರಿ ಪಡಿಸಬೇಕು.
4. ಗಾಳಿ ಚಕ್ರದ ಹಬ್ ಹೈಟಿನಲ್ಲಿ ಪವನ ವೇಗದ ಅಳತೆ ಖಾತರಿಪಡಿಸಲು ಕೆಳಗಿನ ಕೋಷ್ಠಕದಲ್ಲಿ ವಿವರಿಸಿರುವಂತೆ ಪ್ರತಿ 5 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಗೆ ಒಂದರಂತೆ ಗಾಳಿ ಕಂಬವನ್ನು (ವಿಂಡ್ ಮಾಸ್ಟ್) ಅಳವಡಿಸಬೇಕು. ಅಳತೆ ವಿವರಗಳನ್ನು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಸಲ್ಲಿಸುವುದು.

| ಗಾಳಿ ಶಕ್ತಿ ವಿದ್ಯುತ್ತಿನ ದೂರ ಸಾಮರ್ಥ್ಯ | 5 ಮೆಗಾವ್ಯಾಟ್ ಗಾಳಿ ಯೋಜನೆಯಲ್ಲಿ ಸಾಧಾರಣ ಗಾಳಿ ಶಕ್ತಿ ವಿದ್ಯುತ್ತಿನ ಸಂಖ್ಯೆ | ಹಾಕಬೇಕಾಗಿರುವ ಗಾಳಿ ಕಂಬ (ವಿಂಡ್ ಮಾಸ್ಟ್‌ಗಳ ಸಂಖ್ಯೆ) |
|---|---|---|
| • 200 ಕಿ.ವ್ಯಾ. ನಿಂದ 300 ಕಿ.ವ್ಯಾ. | 18 | 1 |
| • 300 ಕಿ.ವ್ಯಾ. ನಿಂದ 500 ಕಿ.ವ್ಯಾ. | 15 | 1 |
| • 500 ಕಿ.ವ್ಯಾ. ನಿಂದ 750 ಕಿ.ವ್ಯಾ. | 12 | 1 |
| • 750 ಕಿ.ವ್ಯಾ. ನಿಂದ 1000 ಕಿ.ವ್ಯಾ. | 8 ರಿಂದ 10 | 1 |

5. ಯೋಜನೆಯ ವಿವಿಧ ಹಂತದ ಚಟುವಟಿಕೆಗಳು ಹಾಗೂ ಯೋಜನೆಗಳಿಂದ ಪ್ರಾರಂಭದ ಹಂತದ ತನಕ ವಿವಿಧ ಮೈಲುಗಲ್ಲುಗಳನ್ನು ತೋರಿಸುವ ಪರ್ಟ್ ನಕ್ಷೆಯನ್ನು ತಯಾರಿಸಿ ಮೇಲುಸ್ತುವಾರಿಗಾಗಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಸಲ್ಲಿಸಬೇಕು.
6. ಎಲ್ಲೆಲ್ಲಿ ಶಾಸನಬದ್ಧ ಅನುಮೋದನೆ ಅವಶ್ಯಕತೆಯಿದೆಯೋ ಅಂದರೆ ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ/ಕಂದಾಯ/ವಾಣಿಜ್ಯ & ಕೈಗಾರಿಕೆ ಇಲಾಖೆಗಳ ಮತ್ತು ಇತರ ಸಂಬಂಧಿತ ಇಲಾಖೆಗಳಿಂದ ಅನುಮೋದನೆಯನ್ನು ಹಂಚಿಕೆದಾರರು ಪಡೆದುಕೊಳ್ಳತಕ್ಕದ್ದು.
7. ಯೋಜನಾ ಅಭಿವೃದ್ಧಿದಾರರು ವಿದ್ಯುತ್ತನ್ನು ಮೂರನೆಯವರಿಗೆ ಮಾರಾಟ ಮಾಡುವ ಸಂದರ್ಭದಲ್ಲಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ವೀಲಿಂಗ್ ಅಂಡ್ ಬ್ಯಾಂಕಿಂಗ್ ಒಡಂಬಡಿಕೆ ಮಾಡಿಕೊಳ್ಳಲು ಅನುಮತಿ ನೀಡಲಾಗಿದೆ ಅಥವಾ ಯೋಜನೆಯ ವ್ಯಾಪ್ತಿಯಲ್ಲಿರುವ ವಿದ್ಯುತ್ ಸರಬರಾಜು ಕಂಪನಿಗಳೊಂದಿಗೆ ಪಿ.ಪಿ.ಎ. ಮಾಡಿಕೊಳ್ಳಲು ಅನುಮತಿ ನೀಡಲಾಗಿದೆ.
8. ಕಾಲ ಕಾಲಕ್ಕೆ ಇರುವ ನೀತಿ ನಿಯಮಗಳಿಗೆ ಅನುಗುಣವಾಗಿ ಯಂತ್ರೋಪಕರಣಗಳಿಗೆ ಪ್ರವೇಶ ತೆರಿಗೆಯಿಂದ ವಿನಾಯಿತಿ ನೀಡಲಾಗಿದೆ.
9. ಯೋಜನೆಯನ್ನು ತ್ವರಿತವಾಗಿ ಅನುಷ್ಠಾನ ಮಾಡಲು ಅನುವಾಗುವಂತೆ ರಾಜ್ಯ ಮತ್ತು ಜಿಲ್ಲಾ ಮಟ್ಟದ ಸರ್ಕಾರಿ ಅಧಿಕಾರಿಗಳು ಸಹಕರಿಸುವುದು.
10. ಸದರಿ ಪವನ ವಿದ್ಯುತ್ ಯೋಜನೆಗಾಗಿ ಇಂಧನ ಇಲಾಖೆಯಿಂದ ಜಮೀನನ್ನು ಹಂಚಿಕೆ ಮಾಡಲಾಗಿರುವುದಿಲ್ಲ ಹಾಗೂ ಈ ಹಂಚಿಕೆ ಆದೇಶವು ಪವನ ವಿದ್ಯುತ್ ಯೋಜನೆಯ ಸಾಮರ್ಥ್ಯದ ಹಂಚಿಕೆ ಮಾತ್ರ ಸೀಮಿತವಾಗಿದೆ ಹಾಗೂ ಅಭಿವೃದ್ಧಿದಾರರಿಗೆ ಯೋಜನೆಯ ಜಾಗದಲ್ಲಿಯ ಖನಿಜ ಸಂಪತ್ತು ಹಾಗೂ ಭೂಮಿಯ ಬಗ್ಗೆ ಯಾವುದೇ ಹಕ್ಕು ಇರುವುದಿಲ್ಲ ಎಂಬುದನ್ನು ಮನಗಾಣತಕ್ಕದ್ದು.

ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1326

**ಎಸ್.ಜಿ. ಸಂಪತ್ ಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ

ಇಂಧನ ಇಲಾಖೆ

**ENERGY SECRTARIAT SECRETARIAT**

**Sub :** Extension of time limit to implement the wind power projects in favour M/s ITC Limited-reg.

**Read:**
1) G.O. No. EN 84 NCE 2010,dated 06.03.2010.
2) G.O. No. EN 85 NCE 2010,dated 06.03.2010.
3) G.O. No. EN 86 NCE 2010,dated 06.03.2010.
4) G.O. No. EN 87 NCE 2010,dated 06.03.2010.
5) G.O. No. EN 88 NCE 2010,dated 06.03.2010.
6) G.O. No. EN 89 NCE 2010,dated 06.03.2010.
7) G.O. No. EN 90 NCE 2010,dated 06.03.2010.
8) G.O. No. EN 91 NCE 2010,dated 06.03.2010.
9) G.O. No. EN 92 NCE 2010,dated 06.03.2010.
10) Letter No. KRED/08/ITC/2010/1150, Dated 27/28.04.2010.

**PREAMBLE:-**

In the Government Orders read at Sl.No: (1) to (6) M/sITC Limited was accorded permission for 126 MW Wind power capacity for implementation subject to condition that the project shall be commissioned by 31st March 2010.

In the Government Ordes read at Sl.No: (7) to (9) M/s ITC Limited was accorded permissxion for 6.3 MW Wind power capacity for implementation subject to condition that the project shall be commissioned by 30th April 2010.

In the letter read at (10) above, the Managing Directyor,KREDL has reported that the developer has requested to extend the time limit up to 90 days from the date of expiry,for completion of all formalities that are required for commissioning the project. Accordingly, he has sent aproposal requesting to Revalidate the Government Orders read at 01 to 09 for a further period of 90 days from the date of expiry mentioned in the above Government Orders.

The proposal has been examined in detail and issued following Order:-

**GOVERNMENT ORDER NO: EN 84 NCE 2010 (part), BANGALORE, DATED: 21.05.2010**

Government accords approval for the extention of days (Ninety) time limit from the date of expiry to implement the wind power projects in favour of M/s ITC Limited as detailed below:-

| Sl. No. | Company name | Capacity (MW) | Location | Government Order Number and date | Date of Expiry |
|---|---|---|---|---|---|
| 1 | M/s ITC Limited | 2.1 | Konchigere village, Siraguppa Taluk, BellaryDistrict (SND-01) | No.En 84 NCE 2010 Dated: 06.03.2010 | 31.03.2010 |
| 2 | M/s ITC Limited | 2.1 | Konchigere village, Siraguppa Taluk, BellaryDistrict (SND-03) | No.En 85 NCE 2010 Dated: 06.03.200 | 31.03.2010 |
| 3 | M/s ITC Limited | 2.1 | Konchigere village, Siraguppa Taluk, BellaryDistrict (SND-04) | No.En 86 NCE 2010 Dated: 06.03.2010 | 31.03.2010 |
| 4 | M/s ITC Limited | 2.1 | Konchigere village, Siraguppa Taluk, BellaryDistrict (SND-05) | No.En 87 NCE 2010 Dated: 06.03.2010 | 31.03.2010 |
| 5 | M/s ITC Limited | 2.1 | Konchigere village, Siraguppa Taluk, BellaryDistrict (SND-06) | No.En 88 NCE 2010 Dated: 06.03.2010 | 31.03.2010 |
| 6 | M/s ITC Limited | 2.1 | Hagaluru village, Siraguppa Taluk, BellaryDistrict (SND-07) | No.En 89 NCE 2010 Dated: 06.03.2010 | 31.03.2010 |
| 7 | M/s ITC Limited | 2.1 | Hagaluru village, Siraguppa Taluk, BellaryDistrict (SND-08) | No.En 90 NCE 2010 Dated: 06.03.2010 | 31.04.2010 |
| 8 | M/s ITC Limited | 2.1 | Hagaluru village, Siraguppa Taluk, BellaryDistrict (SND-09) | No.En 91 NCE 2010 Dated: 06.03.2010 | 31.04.2010 |
| 9 | M/s ITC Limited | 2.1 | Hagaluru village, Siraguppa Taluk, BellaryDistrict (SND-11) | No.En 92 NCE 2010 Dated: 06.03.2010 | 31.04.2010 |

The other terms and conditions of the original allotment orders shall be inforce.

By Order and in the name of the Governor of Karnataka

P.R.NO.1327

**S.J. SAMPATH KUMAR**
Under Secretary to Government
Energy Department.

**COMMERCE & INDUSTRIES SECRETARIAT**

**Sub :** Approval to the proposal M/s. Surya Vijayanagar Steel & Power Ltd., to change the name of the company as- M/s. Surya Vijayanagar Cement LTD., to implement the cement manufacturing unit.

**Read:** 1) Govt. Order No: CI 139 SPI 2010, dated : 29.04.2010
2)Representation of the company, dated: 04.05.2010.

**PREAMBLE:-**

M/s. Surya Vijayanagar Steel & Power Ltd., had proposed to establish" a "5 Million MTPA Cement Plant" based on slag produced in their Steel Plant at Bagalkot Disttrict, with an Investment of Rs. 2690 crores, generating employment to about 100 persons. It was also approved that if enough limestone is not available in Bagalkot District, Gulbarga District could also be considered for putting up a clinker

In the 21st State High level Clearance Committee (SHLCC) meeting held on 29.03.2010, the proposal of the Company was approved and G.O. read at (1) above has been issued.

M/s. Surya Vijayanagar Steel & Power Ltd., vide letter (2) above, have requested to change the name of the company as-M/s. Surya Vijaynagar Cement LTD., to implement the cement project.

Hence the following Order:-

**GOVERNMENT ORDER NO: CI 139 SPI 2010, BANGALORE, DATED: 14.05.2010**

Government is pleased to accord approval to change the name of the company from "M/s. Surya Vijayanagar Steel & Pow Ltd., to "M/S. Surya Vijayanagar Cement LTD., to establish a "5 Million MTPA Cement Plant" based on slag produced in their Steel Plant at Baagalkot/Gulbarga Districts, with an investment of Rs. 2690 crores, generating employment to about 1000 person and infrastructure facilities, incentives, concessions and other terms and conditions remainsthe same asin the G.O. read at (1) above.

By Order and in the name of the Governor of Karnataka

P.R.NO.1328

**APARNA PAVATE**
Desk Officer( Technical Cell)
Commerce & Industries Department.

**COMMERCE & INDUSTRIES SECRETARIAT**

**Sub :** Approval to the proposal M/s. Surya Vijayanagar Steel & Power Ltd., to change the name of the company as- M/s. Surya Global Steel Tubes LTD., to implement the steel pipe manufacturing unit.

**Read:** 1) Govt. Order No: CI 140 SPI 2010, dated : 27.04.2010
2)Representation of the company, dated: 04.05.2010.

**PREAMBLE:-**

M/s. Surya Vijayanagar Steel & Power Ltd., had proposed to establish" Steel ERW black & GI pipe-2 LTPA" manufacturing unit in Shimoga District, with an investment of Rs.150 srors, generating employment to about 1000 persons.

In the 21st State High level Clearance Committee (SHLCC) meeting held on 29.03.2010, the proposal of the Company was approved and G.O. read at (1) bove has been issued.

M/s. Surya Vijayanagar Steel & Power Ltd., vide letter (2) above, hve requested to change the name of the company as-M/s. Surya Global Steel Tubes LTD., to implement the Steel pipe manufacturing unit.

Hence the following Order:-

**GOVERNMENT ORDER NO: CI 140 SPI 2010 BANGALORE, DATED: 17.05.2010**

Government is pleased to accord approval to change the name of the company from "M/s. Surya Vijayanagar Steel & Power Ltd., to **"M/S. Surya Global Steel Tubes LTD.,** to establish a "steel ERW Black & GI pipe-2 LTPA" manufacturing unit in Shimoga District, with an investment of Rs.150 crores, generating employment to about 1000 persons and other infrastructure facilities, incentives, concessions and other terms and conditions remain the same as in the G.O. read at (1) above.

By order and in the name of the Governor of Karnataka

P.R.NO.1329

**APARNA PAVATE**
Desk Officer( Technical Cell)
Commerce & Industries Department.

**ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ ಸಚಿವಾಲಯ**

**ವಿಷಯ** : ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಇ–ಆಡಳಿತ)ಗೆ ಸಂಬಂಧಿಸಿದಂತೆ ಮಾಹಿತಿ ಹಕ್ಕು ಅಧಿನಿಯಮ, 2005ರನ್ವಯ ನೋಡಲ್ ಅಧಿಕಾರಿಯನ್ನು ನೇಮಿಸುವ ಬಗ್ಗೆ.

**ಓದಲಾಗಿದೆ** : ಸರ್ಕಾರದ ಪ್ರಧಾನ ಕಾರ್ಯದರ್ಶಿ, ಸಿಆಸುಇ (ಜನಸ್ಪಂದನ), ಇವರ ದಿನಾಂಕ: 10.02.2010ರ ಅ.ಸ. ಪತ್ರ ಸಂಖ್ಯೆ: ಸಿಆಸುಇ 57 ಆರ್‌ಟಿಐ 2009

**ಪ್ರಸ್ತಾವನೆ:**

**1.** ಮಾಹಿತಿ ಹಕ್ಕು ಅಧಿನಿಯಮ, 2005ರ ಕಲಂ 5ರ ಸಂಪೂರ್ಣ ಅನುಷ್ಠಾನಕ್ಕಾಗಿ ಸಚಿವಾಲಯದ ಎಲ್ಲಾ ಇಲಾಖೆಗಳಲ್ಲಿ ಉಪಕಾರ್ಯದರ್ಶಿ, ಹಾಗೂ ಅದಕ್ಕೂ ಮೇಲ್ಪಟ್ಟ ಹುದ್ದೆಯನ್ನು ಹೊಂದಿದ ಅಧಿಕಾರಿಯನ್ನು ನೋಡೆಲ್ ಅಧಿಕಾರಿಯನ್ನಾಗಿ ನೇಮಿಸಬೇಕೆಂದು, ಮೇಲೆ ಓದಲಾದ ದಿನಾಂಕ: 10.02.2010ರ ಅ.ಸ. ಪತ್ರದನ್ವಯ ಸೂಚಿಸಲಾಗಿದೆ. ಅದರಂತೆ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಇ–ಆಡಳಿತ)ಗೆ ಸಂಬಂಧಿಸಿದಂತೆ, ನೋಡೆಲ್ ಅಧಿಕಾರಿಯನ್ನು ನಾಮ ನಿರ್ದೇಶಿಸುವ ಬಗ್ಗೆ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 18 ಇಆಇ 2010, ಬೆಂಗಳೂರು, ದಿನಾಂಕ: 19ನೇ ಮೇ 2010**

2. ಮಾಹಿತಿ ಹಕ್ಕು ಅಧಿನಿಯಮ 2005ರ ಕಲಂ–5ರ ಸಂಪೂರ್ಣ ಅನುಷ್ಠಾನಕ್ಕಾಗಿ ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಇ–ಆಡಳಿತ)ಗೆ ಸಂಬಂಧಿಸಿದಂತೆ ಮಾತ್ರ ಸರ್ಕಾರದ ಅಪರ ಕಾರ್ಯದರ್ಶಿ, ಸಿಆಸುಇ (ಇ–ಆಡಳಿತ) ಇವರನ್ನು ನೋಡಲ್ ಅಧಿಕಾರಿಯನ್ನಾಗಿ ಈ ಮೂಲಕ ನಾಮ ನಿರ್ದೇಶಿಸಲಾಗಿದೆ.

ಪಿ.ಆರ್.ನಂ. 1330

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಜಿ.ಎಸ್. ಪ್ರಸನ್ನ ಕುಮಾರ್**
ಪೀಠಾಧಿಕಾರಿ–1. (ಇ–ಆಡಳಿತ)
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ

**ಶಿಕ್ಷಣ ಸಚಿವಾಲಯ**

**ವಿಷಯ** : ಕೇಂದ್ರೀಯ ವಿಶ್ವವಿದ್ಯಾನಿಲಯ ಸ್ಥಾಪನೆಗೆ ಭೂಮಿಯನ್ನು ಒದಗಿಸುವ ಬಗ್ಗೆ– ಖಾಸಗಿ ಭೂಮಿಯ ಸ್ವಾಧೀನಕ್ಕೆ ಹೆಚ್ಚುವರಿ ಪರಿಹಾರ ಹಣ ಮಂಜೂರು ಮಾಡುವ ಕುರಿತು.

**ಓದಲಾಗಿದೆ** :

**1.** ಸರ್ಕಾರದ ಆದೇಶ ಸಂ. ಆರ್‌ಡಿ 8 ಎಲ್‌ಜಿಜಿ 2008, ದಿನಾಂಕ 22–10–2008
2. ಸರ್ಕಾರದ ಆದೇಶ ಸಂ. ಇಡಿ 91 ಯುಜಿವಿ 2007, ದಿನಾಂಕ 29–01–2009
3. ಜಿಲ್ಲಾಧಿಕಾರಿಗಳು, ಗುಲ್ಬರ್ಗ ಜಿಲ್ಲೆ, ಗುಲ್ಬರ್ಗ ಇವರ ಪತ್ರ ಸಂ. ಕಂ: ಭೂಸ್ವಾ–403/08–09, ದಿನಾಂಕ 11–03–2010
4. ಕೇಂದ್ರೀಯ ವಿಶ್ವವಿದ್ಯಾಲಯ, ಗುಲ್ಬರ್ಗ ಇದರ ಕುಲಪತಿಯವರ ಪತ್ರ ಸಂ. Cuk/vcps/2008-10/1255/4, ದಿನಾಂಕ 25–03–2010

**ಪ್ರಸ್ತಾವನೆ:**

1. ಗುಲ್ಬರ್ಗ ಜಿಲ್ಲೆಯಲ್ಲಿ ಸ್ಥಾಪನೆಯಾಗಿರುವ ಕೇಂದ್ರೀಯ ವಿಶ್ವವಿದ್ಯಾನಿಲಯಕ್ಕೆ ಅವಶ್ಯವಿರುವ 500 ಎಕರೆ ಜಮೀನನ್ನು ಮಂಜೂರು ಮಾಡಬೇಕೆಂಬ ಈ ಇಲಾಖೆಯ ಕೋರಿಕೆಯ ಹಿನ್ನೆಲೆಯಲ್ಲಿ, ಗುಲ್ಬರ್ಗಾ ಜಿಲ್ಲೆಯ ಆಳಂದ ತಾಲ್ಲೂಕಿನ ಕಡಗುಂಚಿ ಗ್ರಾಮದ ಸರ್ವೆ ನಂ. 196/1ರಲ್ಲಿ 184.03 ಎಕರೆ ಮತ್ತು ಸುಂಟನೂರು ಗ್ರಾಮದ ಸರ್ವೆ ನಂ 10ರಲ್ಲಿನ

101.36 ಎಕರೆ ಸರ್ಕಾರಿ ಜಮೀನು, ಹೀಗೆ ಒಟ್ಟು ವಿಸ್ತೀರ್ಣ 285.39 ಎಕರೆ ಜಮೀನನ್ನು ಕರ್ನಾಟಕ ಭೂ ಕಂದಾಯ ಕಾಯ್ದೆ 1964ರ ಕಲಂ 71ರಡಿ ಕಾಯ್ದಿರಿಸಿ ಉನ್ನತ ಶಿಕ್ಷಣ ಇಲಾಖೆಗೆ ವರ್ಗಾಯಿಸಲು ಮೇಲೆ (1) ರಲ್ಲಿ ಓದಲಾಗಿರುವ ಸರ್ಕಾರಿ ಆದೇಶದಲ್ಲಿ ಕಂದಾಯ ಇಲಾಖೆಯು ಆದೇಶಿಸಿದೆ.

2. ಗುಲ್ಬರ್ಗ ಜಿಲ್ಲೆಯ ಆಳಂದ ತಾಲ್ಲೂಕಿನ ಕಡಗುಂಚಿ ಹಾಗೂ ಸುಂಟನೂರು ಗ್ರಾಮಗಳಲ್ಲಿನ ಸರ್ವೆ ನಂ. 175, 177, 178/1 179ರಿಂದ 188ಗಳಲ್ಲಿ ಸರ್ಕಾರಿ ಭೂಮಿಗೆ ಹೊಂದಿಕೊಂಡಿರುವ 300 ಎಕರೆ ಕ್ಷೇತ್ರವನ್ನು ತ್ವರಿತವಾಗಿ ಒಪ್ಪಂದ ಐತೀರ್ಪು ಪ್ರಕಾರ ಸ್ವಾಧೀನಪಡಿಸಿಕೊಳ್ಳಲು ರೂ.450.00 ಲಕ್ಷಗಳ ಅನುದಾನವನ್ನು ಜಿಲ್ಲಾಧಿಕಾರಿಗಳು, ಗುಲ್ಬರ್ಗ ಇವರಿಗೆ ಮೇಲೆ (2) ರಲ್ಲಿ ಓದಲಾದ ಉನ್ನತ ಶಿಕ್ಷಣ ಇಲಾಖೆಯ ಸರ್ಕಾರಿ ಆದೇಶದಲ್ಲಿ ಬಿಡುಗಡೆಗೊಳಿಸಲಾಗಿದೆ.

3. ಈ ಕೇಂದ್ರೀಯ ವಿಶ್ವವಿದ್ಯಾನಿಲಯಕ್ಕೆ ಕನಿಷ್ಠ 500 ಎಕರೆ ಜಮೀನನ್ನು ನೀಡಲು ತೀರ್ಮಾನವಾಗಿರುವುದರಿಂದ, ಗುಲ್ಬರ್ಗ ಜಿಲ್ಲೆಯ ಆಳಂದ ತಾಲ್ಲೂಕಿನ ಕಡಗುಂಚಿ ಮತ್ತು ಸುಂಟನೂರು ಗ್ರಾಮಗಳಲ್ಲಿ ಲಭ್ಯವಿರುವ 285.39 ಎಕರೆ ಸರ್ಕಾರಿ ಜಮೀನು ಮತ್ತು ಅದಕ್ಕೆ ಹೊಂದಿಕೊಂಡಿರುವ 308 ಎಕರೆ ಖಾಸಗಿ ಜಮೀನನ್ನು ಭೂಸ್ವಾಧೀನಪಡಿಸಿಕೊಳ್ಳಲು ಉದ್ದೇಶಿಸಿದ್ದು, ಭೂಸ್ವಾಧೀನ ಕಾಯ್ದೆ ಕಲಂ 4(1)ರ ಅಧಿಸೂಚನೆಯನ್ನು ಹೊರಡಿಸಿ ಭೂ ಮಾಲೀಕರಿಗೆ ಜಾರಿಗೊಳಿಸಲಾಗಿದೆ. ಈ ಮಧ್ಯೆ ಭೂ ಮಾಲೀಕರು ತಮ್ಮ ಜಮೀನುಗಳಿಗೆ ಮಾರುಕಟ್ಟೆ ಬೆಲೆಯನ್ನು ನಿಗದಿಪಡಿಸಲು ಕೋರಿದಾಗ, ದಿನಾಂಕ 18–5–2009 ರಂದು ಜಿಲ್ಲಾ ಭೂ ಬೆಲೆ ನಿರ್ಧರಣಾ ಸಮಿತಿಯು ಸಭೆಯನ್ನು ಜರುಗಿಸಿ ಸ್ವಾಧೀನಕ್ಕೆ ಒಳಪಟ್ಟ ಜಮೀನುಗಳ ಮಾರುಕಟ್ಟೆ ಬೆಲೆಯನ್ನು ನಿಗದಿಪಡಿಸಲಾಗಿದೆ. ಭೂ ಸ್ವಾಧೀನಪಡಿಸಿಕೊಂಡು, ನಿಯಮಗಳಂತೆ ಭೂ ಪರಿಹಾರ ನಿಗದಿಪಡಿಸಿದ ನಂತರ ಭೂ ಮಾಲೀಕರು ಹೆಚ್ಚಿನ ಪರಿಹಾರಕ್ಕಾಗಿ ಸಿವಿಲ್ ನ್ಯಾಯಾಲಯಗಳಲ್ಲಿ ದಾವೆಗಳನ್ನು ಹೂಡುತ್ತಾರೆ. ನ್ಯಾಯಾಲಯಗಳು ಕ್ಯಾಪಿಟಲೈಜೇಷನ್ ಪದ್ಧತಿ ಅನುಸರಿಸಿ ಭೂಸ್ವಾಧಿನಾಧಿಕಾರಿಗಳು ನೀಡಿದ ಬೆಲೆಗಿಂತ ಎರಡರಿಂದ ಮೂರು ಪಟ್ಟು ಹೆಚ್ಚಿಸಿ ಜಮೀನಿನ ಬೆಲೆಯನ್ನು ನಿಗದಿಪಡಿಸುತ್ತಿದ್ದಾರೆ. ಈ ಕಾರಣದಿಂದ ಜಮೀನು ನೀಡುವ ಮತ್ತು ಪಡೆಯುವ ಇಲಾಖೆ/ಸಂಸ್ಥೆಯ ನಡುವೆ ಒಪ್ಪಂದ ಬೆಲೆಯನ್ನು ನಿಗದಿಪಡಿಸಲಾಗಿರುತ್ತದೆ. ಒಪ್ಪಂದದ ಬೆಲೆಯನ್ನು ನೀಡಿದಾಗ ಹೆಚ್ಚಿನ ಬೆಲೆಗಾಗಿ ನ್ಯಾಯಾಲಯಕ್ಕೆ ಹೋಗಲು ಅವಕಾಶವಿರುವುದಿಲ್ಲ. ಕಡಗುಂಜಿ ಗ್ರಾಮದಲ್ಲಿ ಒಂದು ಎಕರೆ ಕೃಷಿ ಭೂಮಿಯ ಸರಾಸರಿ ಮಾರುಕಟ್ಟೆ ಬೆಲೆ ರೂ.76,362/– ಆಗಿರುತ್ತದೆ. ಸರ್ಕಾರಿ ಆದೇಶ ಸಂಖ್ಯೆ: ಆರ್ ಡಿ 13 ಭೂಸ್ವಾಧ 2006, ದಿನಾಂಕ 24–2–2006ರ ಅನ್ವಯ ನೊಂದಣಿ ಸರಾಸರಿ ಬೆಲೆಯು ಎರಡು ಪಟ್ಟು ಬೆಲೆ ಅಂದರೆ, ರೂ.1,52,724/– ಗಳನ್ನು ನಿಗದಿಪಡಿಸಬಹುದಾಗಿರುತ್ತದೆ. ಆದರೆ, ಸದರಿ ಜಮೀನುಗಳೂ ಜಿಲ್ಲಾ ಕೇಂದ್ರವಾದ ಗುಲ್ಬರ್ಗಾದಿಂದ ಕೇವಲ 20 ಕಿ.ಮೀ. ಅಂತರದಲ್ಲಿದ್ದು, ಗುಲ್ಬರ್ಗಾ–ಆಳಂದ ರಾಜ್ಯ ಹೆದ್ದಾರಿ (ರಿಬ್ಬನಪಲ್ಲಿ–ವಾಗ್ದಂ) ಮುಖ್ಯರಸ್ತೆಗೆ ಹೊಂದಿಕೊಂಡಿದೆ ಎಂದೂ, ರೈತರು ಸ್ಟಾಂಪ್‌ಡ್ಯೂಟಿ ಹಣ ಉಳಿತಾಯ ಮಾಡುವ ದೃಷ್ಠಿಯಿಂದ ಹೆಚ್ಚಿನ ಬೆಲೆಗೆ ಜಮೀನಿನ ಖರೀದಿ ನಡೆದಿದ್ದರೂ, ಅದನ್ನೂ ಕಡಿಮೆ ಬೆಲೆಗೆ ನೊಂದಣಿ ಮಾಡುವುದರಿಂದ ನೊಂದಣಿ ಬೆಲೆಯು ವಾಸ್ತವವಾಗಿರುವುದಿಲ್ಲ. ಆದ್ದರಿಂದ ತಮ್ಮ ಜಮೀನುಗಳಿಗೆ ರೂ.3ರಿಂದ 4ಲಕ್ಷ ನೀಡಬಹುದು ಎಂದು ರೈತರು ಅಭಿಪ್ರಾಯಪಟ್ಟಿರುತ್ತಾರೆ. ರೈತರ ಈ ಬೇಡಿಕೆಯನ್ನು ಬೆಲೆ ನಿರ್ಧರಣಾ ಸಮಿತಿಯ ಅಧ್ಯಕ್ಷರು ಜಮೀನುಗಳ ಗುಣಧರ್ಮ, ಅದರಲ್ಲಿನ ಬೆಳೆ ಪದ್ಧತಿ, ಜಮೀನುಗಳಿಗಿರುವ ರಸ್ತೆಯ ಸೌಲಭ್ಯ, ಸದ್ಯ ಗ್ರಾಮದಲ್ಲಿ ಚಾಲ್ತಿಯಲ್ಲಿರುವ ಜಮೀನು ಮಾರಾಟದ ಬೆಲೆ ಇತ್ಯಾದಿಗಳನ್ನು ಪರಿಗಣಿಸಿ ಖುಷ್ಕಿ ಜಮೀನುಗಳಿಗೆ ಎಕರೆಯೊಂದಕ್ಕೆ ರೂ. 2.50 ಲಕ್ಷ ಮತ್ತು ನೀರಾವರಿ ಜಮೀನುಗಳಿಗೆ ರೂ.3.00 ಲಕ್ಷ ಒಪ್ಪಂದದ ಬೆಲೆಯನ್ನು ನೀಡಲಾಗುವುದೆಂದು ಘೋಷಿಸಿದಾಗ ಅದಕ್ಕೆ ಭೂಮಾಲೀಕರು ಒಪ್ಪಿಗೆಯನ್ನು ಸೂಚಿಸಿರುತ್ತಾರೆ. ಹಾಗೆಯೇ ಹೆಚ್ಚುವರಿ 32.11 ಎಕರೆ ಜಮೀನನ್ನು ಭೂಸ್ವಾಧೀನ ಕ್ಷೇತ್ರಕ್ಕೆ ಒಳಪಡಿಸಬೇಕಾಗಿದೆ. ಇದಕ್ಕೆ ಎಕರೆ ಒಂದಕ್ಕೆ ರೂ. 2.50 ಲಕ್ಷದಂತೆ ಬೆಲೆ ನಿಗದಿಮಾಡಲಾಗಿದೆ ಎಂದು ಗುಲ್ಬರ್ಗ ಜಿಲ್ಲೆಯ ಜಿಲ್ಲಾಧಿಕಾರಿಗಳು ತಿಳಿಸಿರುತ್ತಾರೆ. ಈ ಹಿನ್ನೆಲೆಯಲ್ಲಿ ಗುಲ್ಬರ್ಗ ಜಿಲ್ಲೆಯ ಆಳಂದ ತಾಲ್ಲೂಕಿನ 308 ಎಕರೆ ಖಾಸಗಿ ಜಮೀನುಗಳ ಭೂ ಪರಿಹಾರ ಹಣ ಪಾವತಿಗಾಗಿ ಒಟ್ಟು ರೂ.8,81,68,750/– ಗಳ ಅವಶ್ಯಕತೆಯಿದ್ದು ಇದರಲ್ಲಿ ಈಗಾಗಲೇ ದಿನಾಂಕ: 29–01–2009ರಂದು ರೂ.4.50 ಕೋಟಿಗಳು ಬಿಡುಗಡೆಯಾಗಿದೆ. ಈಗ ಪ್ರಸ್ತಾಪಿಸಿದಂತೆ, ಬಾಕಿ ರೂ.4,31,68,750/– ಗಳು ಬಿಡುಗಡೆ ಮಾಡಬೇಕೆಂದು ಜಿಲ್ಲಾಧಿಕಾರಿಗಳು, ಗುಲ್ಬರ್ಗಜಿಲ್ಲೆ, ಗುಲ್ಬರ್ಗಾ ಇವರು ಮೇಲೆ (3) ರಲ್ಲಿ ಓದಲಾದ ಪತ್ರದಲ್ಲಿ ತಿಳಿಸಿರುತ್ತಾರೆ.

4. ಗುಲ್ಬರ್ಗದಲ್ಲಿ ಪ್ರಾರಂಭವಾಗಿರುವ ಕೇಂದ್ರೀಯ ವಿಶ್ವವಿದ್ಯಾಲಯದ ಮೂಲಭೂತ ಸೌಕರ್ಯಗಳ ನಿರ್ಮಾಣ ಪ್ರಾರಂಭವಾಗಿದೆ. ಕಟ್ಟಡದ ವಾಸ್ತುಶಿಲ್ಪಿಯನ್ನು ಮತ್ತು ಯೋಜನಾ ನಿರ್ವಹಣಾ ಸಲಹೆಗಾರರನ್ನು ಅಂತಿಮಗೊಳಿಸಲಾಗಿದ್ದು, ನಿರ್ಮಾಣದ ಅಂದಾಜು ವೆಚ್ಚಗಳ ತಯಾರಿಕೆಯು ಶೀಘ್ರದಲ್ಲೇ ಪೂರ್ಣಗೊಳಿಸಲಾಗುವುದು ಎಂದು ಕೇಂದ್ರೀಯ ವಿಶ್ವವಿದ್ಯಾಲಯದ ಕುಲಪತಿಯವರು ತಿಳಿಸುತ್ತಾ, ಭೂಸ್ವಾಧೀನಕ್ಕೆ ಅಗತ್ಯ ಉಳಿಕೆ ಹಣವನ್ನು ಶೀಘ್ರವಾಗಿ ಬಿಡುಗಡೆಗೊಳಿಸಬೇಕೆಂದು ಮೇಲೆ (4) ರಲ್ಲಿ ಓದಲಾದ ಪತ್ರದಲ್ಲಿ ಸರ್ಕಾರವನ್ನು ಕೋರಿರುತ್ತಾರೆ.

5. ಈ ಮೇಲ್ಕಂಡ ಎಲ್ಲಾ ಅಂಶಗಳ ಹಿನ್ನೆಲೆಯಲ್ಲಿ, ಜಿಲ್ಲಾಧಿಕಾರಿಯವರು, ಗುಲ್ಬರ್ಗ ಜಿಲ್ಲೆ ಗುಲ್ಬರ್ಗಾ ಇವರ ಪ್ರಸ್ತಾವನೆಯ ಮೇಲೆ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ ಇಡಿ 91 ಯುಜಿವಿ 2007, ಬೆಂಗಳೂರು ದಿನಾಂಕ: 14-05-2010**

ಗುಲ್ಬರ್ಗಾದಲ್ಲಿ ಸ್ಥಾಪನೆಯಾಗಿರುವ ಕೇಂದ್ರೀಯ ವಿಶ್ವವಿದ್ಯಾಲಯದ ಕ್ಯಾಂಪಸ್‌ಅನ್ನು ರಚಿಸುವ ಸಲುವಾಗಿ ಸ್ವಾಧೀನವಾಗುತ್ತಿರುವ ಖಾಸಗಿ ಭೂಮಿಗೆ ಹೆಚ್ಚುವರಿ ಪರಿಹಾರ ಮೊತ್ತ ರೂ.431.68.00 ಲಕ್ಷಗಳನ್ನು ಜಿಲ್ಲಾಧಿಕಾರಿ, ಗುಲ್ಬರ್ಗ ಜಿಲ್ಲೆ, ಗುಲ್ಬರ್ಗ ಇವರಿಗೆ ಈ ಕೆಳಕಂಡ ರೀತಿಯಲ್ಲಿ ಮತ್ತು ಷರತ್ತುಗಳಿಗೊಳಪಟ್ಟು ಬಿಡುಗಡೆ ಮಾಡಲು ಅನುಮೋದಿಸಲಾಗಿದೆ.

(1) ಜಿಲ್ಲಾ ಭೂ ನಿರ್ಧರಣಾ ಸಮಿತಿ ಸಭೆಯಲ್ಲಿ ನಿಗದಿಪಡಿಸಿದ ಮಾರುಕಟ್ಟೆ ಬೆಲೆಗೆ ಖಾಸಗಿ ಜಮೀನನ್ನು ಖರೀದಿಸಲು (ಸ್ವಾಧೀನಕ್ಕೆ ಒಳಪಟ್ಟ ಖುಷ್ಕಿ ಜಮೀನು ಒಂದು ಎಕರೆಗೆ ರೂ.2.50 ಲಕ್ಷದಂತೆ ನೀರಾವರಿ ಜಮೀನಿಗೆ ಒಂದು ಎಕರೆಗೆ ರೂ.3.00 ಲಕ್ಷದಂತೆ;):

(2) ಸ್ವಾಧೀನಕ್ಕೆ ಒಳಪಟ್ಟಿರುವ ಹೆಚ್ಚುವರಿ ಕ್ಷೇತ್ರ 32.11 ಎಕರೆ ಜಮೀನಿನ ಖರೀದಿಗೆ (ಒಂದು ಎಕರೆಗೆ ರೂ.2.50 ಲಕ್ಷದಂತೆ):

(3) ಭೂ ಸ್ವಾಧೀನವನ್ನು ಮಾಡುವಾಗ ಭೂಮಿಗೆ ದರವನ್ನು ಕೆಲವು ಮಾನದಂಡಗಳನ್ನನುಸರಿಸಿ, ನಿಗದಿಪಡಿಸಬೇಕೆಂದು ಸೂಚಿಸಲಾಗಿದೆ.

(4) ಮೇಲ್ಕಂಡ ಮೊತ್ತವನ್ನು 2010-11ನೇ ಆರ್ಥಿಕ ಸಾಲಿನ ಪೂರಕ ಅಂದಾಜುಗಳು-1ರಲ್ಲಿ ಒದಗಿಸುವ ಮೊತ್ತದಿಂದ ಬಿಡುಗಡೆ ಮಾಡಲಾಗುವುದು.

2) ಈ ಆದೇಶವನ್ನು ಆರ್ಥಿಕ ಇಲಾಖೆಯು ತನ್ನ ಟಿಪ್ಪಣಿ ಸಂ. ಎಫ್ ಡಿ 340 Exp.8/2010, ದಿನಾಂಕ 05-04-2010ರ ಮೂಲಕ ನೀಡಿರುವ ಅನುಮೋದನೆಯನುಸಾರ ಹಾಗೂ ಕರ್ನಾಟಕ ಸರ್ಕಾರ (ವ್ಯವಹಾರ ನಿರ್ವಹಣೆ) ನಿಯಮಗಳು 1977ರ ಷೆಡ್ಯೂಲ್ 1ರ ಐಟಂ 15ರ ಪಾವಿಜೋ ರೀತ್ಯ ಹೊರಡಿಸಲಾಗಿದೆ.

ಪಿ.ಆರ್.ನಂ. 1331

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಯು.ಬಿ.ಉಳವಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಶಿಕ್ಷಣ ಇಲಾಖೆ (ವಿಶ್ವವಿದ್ಯಾನಿಲಯಗಳು).

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ** : ಸಂಜಯಗಾಂಧಿ ಟ್ರಾಮ ಮತ್ತು ಅಸ್ಥಿ ಚಿಕಿತ್ಸಾ ಸಂಸ್ಥೆಯಲ್ಲಿ ದ್ರವ್ಯ ತ್ಯಾಜ್ಯ ವಸ್ತುಗಳ ನಿರ್ವಹಣಾ ಸ್ಥಾವರವನ್ನು ಸ್ಥಾಪಿಸಲು ಅನುದಾನ ಬಿಡುಗಡೆ- ಆಡಳಿತಾತ್ಮಕ ಮಂಜೂರಾತಿ ನೀಡುವ ಬಗ್ಗೆ.

**ಓದಲಾಗಿದೆ** : **1)** ಸಂಜಯಗಾಂಧಿ ಟ್ರಾಮ ಮತ್ತು ಅಸ್ಥಿ ಚಿಕಿತ್ಸಾ ಸಂಸ್ಥೆ ನಿರ್ದೇಶಕರ ಪತ್ರ ಸಂಖ್ಯೆ: ಎಸ್ ಯು ಪಿ/ಪಿಸಿಬಿಎಲ್/70/06/07/10-11, ದಿನಾಂಕ: 08.02.2010.

**2)** ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿ, ಹಿರಿಯ ಪರಿಸರ ಅಧಿಕಾರಿಯ ಪತ್ರ ಸಂಖ್ಯೆ: ಪಿಸಿಆರ್/4/ಬಿಎಂಡಬ್ಲ್ಯೂ-09-ಹೆಚ್ 2468 ದಿನಾಂಕ: 26.03.2010.

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ಪತ್ರದಲ್ಲಿ, ಸಂಜಯಗಾಂಧಿ ಟ್ರಾಮ ಮತ್ತು ಅಸ್ಥಿ ಚಿಕಿತ್ಸಾ ಸಂಸ್ಥೆಯು ಅಸ್ಥಿ ಚಿಕಿತ್ಸೆ ಆಧಾರಿತ (ರೆಫೆರಲ್) ಕೇಂದ್ರವಾಗಿರುತ್ತದೆ. ಸಂಸ್ಥೆಗೆ ಅಪಘಾತಕ್ಕೀಡಾದ ಮತ್ತು ದಿನನಿತ್ಯದ ಕೀಲು ಮತ್ತು ಮೂಳೆಗಳ ಚಿಕಿತ್ಸೆಗಾಗಿ ಬೆಂಗಳೂರಿನ ಸುತ್ತಮುತ್ತಲಿಂದ ಮತ್ತು ಸದರಿ ವಿಷಯದಲ್ಲಿ ಹೆಚ್ಚಿನ ಮಾಹಿತಿ ಅಥವಾ ಉಲ್ಲೇಖಕ್ಕಾಗಿ ರೋಗಿಗಳು ಬರುತ್ತಿರುವುದರಿಂದ, ಸದರಿ ಸಂಸ್ಥೆಯ ನಿರ್ದೇಶಕರು ದ್ರವ್ಯ ತ್ಯಾಜ್ಯ ವಸ್ತುಗಳ ನಿರ್ವಹಣಾ ಸ್ಥಾವರವನ್ನು ಸ್ಥಾಪಿಸಲು ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಸದರಿ ಕಾಮಗಾರಿಗೆ ರೂ.37.00.000/-ಗಳ ಅಂದಾಜು ವೆಚ್ಚದ ಪಟ್ಟಿಯನ್ನು ಕಾರ್ಯಪಾಲಕ ಅಭಿಯಂತರರು ಸಲ್ಲಿಸಿರುತ್ತಾರೆ. ಯೋಜನೆಯ ದ್ರವ್ಯ ತ್ಯಾಜ್ಯ ವಸ್ತುಗಳ ನಿರ್ವಹಣಾ ಸಲಹೆಗಾರರು, ದ್ರವ್ಯ ತ್ಯಾಜ್ಯ ವಸ್ತುಗಳ ನಿರ್ವಹಣಾ ಸ್ಥಾವರವನ್ನು ಸ್ಥಾಪಿಸುವ ಬಗ್ಗೆ ಸಿದ್ಧಪಡಿಸಿರುವ ವಿನ್ಯಾಸವನ್ನು ಉಲ್ಲೇಖ (2)ರನ್ವಯ ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿಯು ಅನುಮೋದಿಸಿದೆ.

ಆದ್ದರಿಂದ ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂ: ಹೆಚ್‌ಎಫ್‌ಡಬ್ಲ್ಯೂ/ಕೆಹೆಚ್‌ಎಸ್‌ಡಿಆರ್‌ಪಿ/ಹೆಚ್‌ಸಿಡಬ್ಲ್ಯೂಎಮ್/ಎಸ್‌ಜಿ3/33/2009-10 ಬೆಂಗಳೂರು, ದಿನಾಂಕ: 20-05-2010.**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕೆಹೆಚ್‌ಎಸ್‌ಡಿಆರ್‌ಪಿ ಯೋಜನಾ ವತಿಯಿಂದ ಎಸ್‌ಐಸಿಎಫ್ ಅಡಿಯಲ್ಲಿ ಸಂಜಯಗಾಂಧಿ ಟ್ರಾಮ ಮತ್ತು ಅಸ್ಥಿ ಚಿಕಿತ್ಸಾ ಸಂಸ್ಥೆಯಲ್ಲಿ ದ್ರವ್ಯ ತ್ಯಾಜ್ಯ ವಸ್ತುಗಳ ನಿರ್ವಹಣಾ

ಸ್ಥಾವರವನ್ನು ಸ್ಥಾಪಿಸಲು ಅಂದಾಜು ವೆಚ್ಚ ರೂ. 37,00,000/– (ಮುವತ್ತೇಳು ಲಕ್ಷ ರೂಪಾಯಿಗಳು ಮಾತ್ರ)ಗಳಿಗೆ ಆಡಳಿತಾತ್ಮಕ ಮಂಜೂರಾತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1332

**ಎಂ. ಶಶಿಧರ್**
ಸರ್ಕಾರದ ಉಪ ಕಾರ್ಯದರ್ಶಿ
ಕೆಹೆಚ್ಎಸ್ಡಿಆರ್‌ಪಿ
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ

**ಒಳಾಡಳಿತ ಸಚಿವಾಲಯ**

**ತಿದ್ದುಪಡಿ**

**ನಂ : ಒಇ 53 ಕಸೈಸೇ 2009 ಬೆಂಗಳೂರು, ದಿನಾಂಕ:19/05/2010**

ಸರ್ಕಾರಿ ಆದೇಶ ಸಂಖ್ಯೆ: ಒಇ 52 ಕಸೈಸೇ 99, ದಿನಾಂಕ: 25–06–99ರ ಆದೇಶ ಭಾಗದಲ್ಲಿನ 3ನೇ ಕಂಡಿಕೆಯಲ್ಲಿ ಬಿ.ಎಸ್.ಎಫ್: ಆರ್.ಪಿ.ಎಫ್. ಪದದ ನಂತರ "ಸಿ. ಆರ್.ಪಿ.ಎಫ್" ಎಂಬ ಪದವನ್ನು ಸೇರಿಸಿಕೊಂಡು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1333

**ಬಿ.ಎಂ. ಲಕ್ಷ್ಮೀ ನಾರಾಯಣ**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ
ಪೊಲೀಸ್ ಸಹಾಯಕ ಸೇವೆಗಳು

**ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಆಕುಕ 29 ಹೆಚ್ಎಸ್‌ಡಿ 2010 ಬೆಂಗಳೂರು, ದಿನಾಂಕ: 22.05.2010**

**ವಿಷಯ** : 2010–11ನೇ ಸಾಲಿನಲ್ಲಿ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಸೇವಾನಿರತ ದಂತ ಆರೋಗ್ಯಾಧಿಕಾರಿಗಳನ್ನು ಸ್ನಾತಕೋತ್ತರ ವ್ಯಾಸಂಗಕ್ಕೆ ನಿಯೋಜಿಸುವ ಬಗ್ಗೆ.

**ಉಲ್ಲೇಖ** : 1. ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು ಇವರ ಪತ್ರ ಸಂಖ್ಯೆ: ಎಲ್ಆರ್ಒ /98/2009–10 ದಿನಾಂಕ: 21/05/2010
2. ರಾಜೀವ್ ಗಾಂಧಿ ಆರೋಗ್ಯ ವಿಜ್ಞಾನಗಳ ವಿಶ್ವವಿದ್ಯಾಲಯ, ಬೆಂಗಳೂರುರವರ ಪತ್ರ ಸಂಖ್ಯೆ: ಪಿಜಿಇಟಿ–10/ಕೌನ್ಸಿಲಿಂಗ್/01–2010–11 ದಿನಾಂಕ: 21/05/2010

1. ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿ ಕಾರ್ಯನಿರ್ವಹಿಸುತ್ತಿರುವ ಸೇವಾನಿರತ ದಂತ ಆರೋಗ್ಯಾಧಿಕಾರಿಗಳು 2010–11 ನೇ ಸಾಲಿನ ಸ್ನಾತಕೋತ್ತರ ವ್ಯಾಸಂಗಕ್ಕಾಗಿ ಅರ್ಜಿ ಸಲ್ಲಿಸಿ, ಕುಲಸಚಿವರು, ರಾಜೀವ್‌ಗಾಂಧಿ ಆರೋಗ್ಯ ವಿಜ್ಞಾನಗಳ ವಿಶ್ವವಿದ್ಯಾನಿಲಯ, ಬೆಂಗಳೂರು ಇವರು ಉಲ್ಲೇಖ–2 ರಲ್ಲಿ ಕೌನ್ಸಿಲಿಂಗ್ ಮೂಲಕ ಆಯ್ಕೆ ಮಾಡಿರುವಂತೆ, ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಇವರು ಆಯ್ಕೆ ಪಟ್ಟಿಯೊಂದಿಗೆ ಉಲ್ಲೇಖ–1 ರಲ್ಲಿ ಕಳುಹಿಸಿರುವ ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೂಡಲೇ ಜಾರಿಗೆ ಬರುವಂತೆ ಈ ಅಧಿಸೂಚನೆಯ ಅನುಬಂಧದಲ್ಲಿರುವ 11 ದಂತ ಆರೋಗ್ಯಾಧಿಕಾರಿಗಳನ್ನು ಅವರುಗಳ ಹೆಸರಿನ ಮುಂದೆ ನಮೂದಿಸಿರುವ ವಿಷಯ ಮತ್ತು ಕಾಲೇಜುಗಳಿಗೆ ನಿಯೋಜಿಸಲಾಗಿದೆ.

2. ಸಂಬಂಧಿಸಿದ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳು/ಜಿಲ್ಲಾ ಶಸ್ತ್ರ ಚಿಕಿತ್ಸಕರು ಮತ್ತು ಸಂಬಂಧಿಸಿದ ಮೇಲಾಧಿಕಾರಿಗಳು ಕರ್ನಾಟಕ ಸರ್ಕಾರಿ ಸೇವಾ ನಿಯಮಗಳಲ್ಲಿ ನಿಗದಿಪಡಿಸಿರುವಂತೆ ಹಾಗೂ ಪ್ರಸ್ತುತ ಜಾರಿಯಲ್ಲಿರುವ ನಿಯಮಗಳಂತೆ ನಮೂನೆ 19 ಮತ್ತು 19–ಎ ಹಾಗೂ ಪೆನಾಲ್ಟಿ ಬಾಂಡ್ ಪಡೆದು ಕೂಡಲೇ ಕರ್ತವ್ಯದಿಂದ ಬಿಡುಗಡೆ ಮಾಡುವ ಬಗ್ಗೆ ಕ್ರಮ ತೆಗೆದುಕೊಳ್ಳುವುದು.

3. ಈ ಅಧಿಸೂಚನೆಯ ಅನುಬಂಧದಲ್ಲಿ ತಿಳಿಸಿರುವ ಸ್ನಾತಕೋತ್ತರ ವ್ಯಾಸಂಗಕ್ಕೆ ಆಯ್ಕೆಯಾಗಿರುವ ಸೇವಾನಿರತ ದಂತ ಆರೋಗ್ಯಾಧಿಕಾರಿಗಳು ಸ್ನಾತಕ್ಕೋತ್ತರ ಕೋರ್ಸಿಗೆ ಪ್ರವೇಶ ಪಡೆದ ನಂತರ ವ್ಯಾಸಂಗದ ರಜೆ ಅಥವ ಪ್ರತಿನಿಯೋಜನಾ

ರಿಯಾಯಿತಿ ಸೌಲಭ್ಯ ಮಂಜೂರಾತಿಗೆ ಸಂಬಂಧಿಸಿದಂತೆ ಸರ್ಕಾರವು ಪ್ರತ್ಯೇಕವಾಗಿ ಪರಿಶೀಲಿಸಿ ಷರತ್ತು ಮತ್ತು ನಿಬಂಧನೆಗಳನ್ನು ಹೊರಡಿಸುವ ಬಗ್ಗೆ ಕ್ರಮ ತೆಗದುಕೊಳ್ಳಲಾಗುವುದು. ಸ್ನಾತಕೋತ್ತರ ಕೋರ್ಸಿಗೆ ಪ್ರವೇಶ ಪಡೆದ ದಿನಾಂಕದಿಂದ ಜಾರಿಗೆ ಬರುವಂತೆ ಸರ್ಕಾರದ ಮಂಜೂರಾತಿ ಇಲ್ಲದೇ ಈ ಅಭ್ಯರ್ಥಿಗಳು ವೇತನ/ರಜೆಯ ವೇತನ ಪಡೆಯಲು ಅವಕಾಶವಿರುವುದಿಲ್ಲ.

4. 2010–11ನೇ ಸಾಲಿನಲ್ಲಿ ಸ್ನಾತಕೋತ್ತರ ವ್ಯಾಸಂಗಕ್ಕೆ ಆಯ್ಕೆಯಾದ ಈ ಅಧಿಸೂಚನೆಯ ಅನುಬಂಧದಲ್ಲಿ ತಿಳಿಸಿರುವ ಸೇವಾನಿರತ ವೈದ್ಯರು ಸಂಬಂಧಪಟ್ಟ ವೈದ್ಯಕೀಯ ಕಾಲೇಜುಗಳಲ್ಲಿ ಸ್ನಾತಕೋತ್ತರ ಕೋರ್ಸು ಪ್ರಾರಂಭವಾಗುವವರೆಗೆ ಕರ್ತವ್ಯ ನಿರ್ವಹಿಸುತ್ತಿದ್ದ ಸ್ಥಳದಲ್ಲಿ ಮುಂದುವರಿಯುವುದು ಹಾಗೂ ತದನಂತರ ಕರ್ತವ್ಯದಿಂದ ಬಿಡುಗಡೆಗೊಳ್ಳತಕ್ಕದ್ದು. ಸಂಬಂಧಿಸಿದ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳು ಹಾಗೂ ಸಂಬಂಧಿಸಿದ ಮೇಲಾಧಿಕಾರಿಗಳು ಅದರಂತೆ ಕ್ರಮತೆಗೆದುಕೊಳ್ಳಬೇಕೆಂದು ಆದೇಶಿಸಲಾಗಿದೆ.

5. ಈ ಆದೇಶವನ್ನು ಆರ್ಥಿಕ ಇಲಾಖೆಯು ಟಿಪ್ಪಣಿ ಸಂಖ್ಯೆ: ಆಇ 693 ವೆಚ್ಚ–5 : 2008 ದಿನಾಂಕ: 31–05–2008 ರಲ್ಲಿ 5 ವರ್ಷಕ್ಕಿಂತ ಕಡಿಮೆ ಸರ್ಕಾರಿ ಸೇವೆ ಸಲ್ಲಿಸಿರುವ ಸೇವಾನಿರತ ಸ್ನಾತಕೋತ್ತರ ವ್ಯಾಸಂಗ ನಡೆಸುತ್ತಿರುವ ವೈದ್ಯಾಧಿಕಾರಿಗಳಿಂದ ಪರಿಷ್ಕೃತ ಕರಾರು ಬಂಧ ಪತ್ರವನ್ನು ಪಡೆಯುವ ಷರತ್ತಿಗೊಳಪಟ್ಟು ನೀಡಿರುವ ಸಹಮತಿಯೊಂದಿಗೆ ಹೊರಡಿಸಿದೆ.

6. ಸ್ನಾತಕೋತ್ತರ ವ್ಯಾಸಂಗಕ್ಕೆ ಸಂಬಂಧಿಸಿದಂತೆ ಕರ್ನಾಟಕ ಆಡಳಿತ ನ್ಯಾಯ ಮಂಡಳಿ/ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ ಸಲ್ಲಿಸಿರುವ ಅರ್ಜಿಯ ಮೇಲಿನ ಅಂತಿಮ ತೀರ್ಮಾನಕ್ಕೆ ಈ ಆದೇಶವು ಒಳಪಟ್ಟಿರುತ್ತದೆ.

ಈ ಅಧಿಸೂಚನೆಯನ್ನು ಸರ್ಕಾರಿ ಆದೇಶ ಸಂಖ್ಯೆ:ಆಇ 02 ಎಸ್‌ಆರ್‌ಎ 2008 ದಿನಾಂಕ: 05–06–2008ರಲ್ಲಿ ಇಲಾಖಾ ಪ್ರಧಾನ ಕಾರ್ಯದರ್ಶಿಯವರಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಐ. ಹೇಮನಾಥ್**
ಸರ್ಕಾರದ ಅಧೀನ ಕಾರ್ಯದರ್ಶಿ
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.
(ಸೇವೆಗಳು–1)

**ಅನುಬಂಧ**

2010–11ನೇ ಸಾಲಿಗೆ ಸ್ನಾತಕೋತ್ತರ ವ್ಯಾಸಂಗಕ್ಕೆ ನಿಯೋಜಿಸಬೇಕಾದ ದಂತ ಆರೋಗ್ಯಾಧಿಕಾರಿಗಳ ಪಟ್ಟಿ.

| ಕ್ರಮ ಸಂಖ್ಯೆ | ಸೇವಾ ನಿರತ ದಂತ ಆರೋಗ್ಯಾಧಿಕಾರಿಯ ಹೆಸರು & ಕಾರ್ಯ ನಿರ್ವಹಿಸುತ್ತಿರುವ ಸ್ಥಳ | ಆಯ್ಕೆ ಮಾಡಿದ ಸ್ನಾತಕೋತ್ತರ ವಿಷಯ | ಆಯ್ಕೆ ಮಾಡಿದ ಕಾಲೇಜಿನ ಹೆಸರು |
|---|---|---|---|
| 1 | ಡಾ: ಶಾಂತಲ. ಕೆ. ಎಸ್<br>ಜಿಲ್ಲಾ ಆಸ್ಪತ್ರೆ, ಧಾರವಾಡ. | ಎಂಡಿಎಸ್(ಆರ್ಥೋಡಾಂಶಿಯಾ) | ಕಾಲೇಜ್ ಆಫ್ ಡೆಂಟಲ್ ಸೈನ್ಸ್, ದಾವಣಗೆರೆ |
| 2 | ಡಾ: ನವೀನ್.ಸಿ.ಆರ್<br>ಸಾರ್ವಜನಿಕ ಆಸ್ಪತ್ರೆ. ತುರುವೇಕೆರೆ, ತುಮಕೂರು ಜಿಲ್ಲೆ. | ಎಂಡಿಎಸ್(ಆರ್ಥೋಡಾಂಶಿಯಾ) | ಆರ್.ವಿ.ಡೆಂಟಲ್ ಕಾಲೇಜು, ಬೆಂಗಳೂರು |
| 3 | ಡಾ: ನಾಗೇಂದ್ರ ಗುಪ್ತ<br>ಸಾರ್ವಜನಿಕ ಆಸ್ಪತ್ರೆ, ಚಿಕ್ಕಬಳ್ಳಾಪುರ | ಎಂಡಿಎಸ್(ಕನ್ಸರ್‌ವೇಟಿವ್ ಡೆಂಟಿಸ್ಟ್ರಿ) | ಸರ್ಕಾರಿ ದಂತ ಕಾಲೇಜು ಮತ್ತು ಸಂಶೋಧನಾ ಸಂಸ್ಥೆ. ಬೆಂಗಳೂರು |
| 4 | ಡಾ: ಜಯದೀಪ್.ಎನ್.ಎ<br>ಸಮುದಾಯ ಆರೋಗ್ಯ ಕೇಂದ್ರ, ಬಂಟ್ವಾಳ, ದಕ್ಷಿಣ ಕನ್ನಡ ಜಿಲ್ಲೆ. | ಎಂಡಿಎಸ್ (ಓರಲ್ ಸರ್ಜರಿ) | ಎ.ಜೆ.ಇನ್ಸ್‌ಟಿಟ್ಯೂಟ್ ಆಫ್ ಡೆಂಟಲ್ ಸೈನ್ಸ್, ಮಂಗಳೂರು |
| 5 | ಡಾ: ಸೈಯದ್ ಜಿಯಾವುದ್ದೀನ್<br>ಸಾರ್ವಜನಿಕ ಆಸ್ಪತ್ರೆ, ದೊಡ್ಡಬಳ್ಳಾಪುರ | ಎಂಡಿಎಸ್(ಕನ್ಸರ್‌ವೇಟಿವ್ ಡೆಂಟಿಸ್ಟ್ರಿ) | ಎ.ಇ.ಸಿ.ಎಸ್ ಮಾರುತಿ ಡೆಂಟಲ್ ಕಾಲೇಜು, ಬೆಂಗಳೂರು |

| | | | |
|---|---|---|---|
| 6 | ಡಾ: ಸುಧೀರ್ ರಾಯ್ಕರ್<br>ಸಾರ್ವಜನಿಕ ಆಸ್ಪತ್ರೆ, ಯಲಬುರ್ಗಾ | ಎಂಡಿಎಸ್(ಆರ್ಥೋಡಾಂಶಿಯಾ) | ಎಂ.ಎಸ್. ರಾಮಯ್ಯ ಡೆಂಟಲ್ ಕಾಲೇಜು, ಬೆಂಗಳೂರು |
| 7 | ಡಾ: ವೇಣುಗೋಪಾಲ್.ಜಿ.ಎಸ್<br>ಸಾರ್ವಜನಿಕ ಆಸ್ಪತ್ರೆ, ಚಿಂತಾಮಣಿ | ಎಂಡಿಎಸ್(ಆರ್ಥೋಡಾಂಶಿಯಾ) | ಕೆ.ಎಲ್.ಇ ಡೆಂಟಲ್ ಕಾಲೇಜು, ಬೆಂಗಳೂರು |
| 8 | ಡಾ: ಶಶಿಕಿರಣ್.ಜೆ<br>ಸಾರ್ವಜನಿಕ ಆಸ್ಪತ್ರೆ, ಅರಸೀಕೆರೆ, ಹಾಸನ ಜಿಲ್ಲೆ | ಎಂಡಿಎಸ್(ಕನ್ಸರ್‌ವೇಟಿವ್ ಡೆಂಟಿಸ್ಟ್ರಿ) | ಕಾಲೇಜ್ ಆಫ್ ಡೆಂಟಲ್ ಸೈನ್ಸ್, ದಾವಣಗೆರೆ. |
| 9 | ಡಾ: ಮಂಜುನಾಥ್ ಮೆಸ್ತಾ<br>ತಾಲ್ಲೂಕು ಆಸ್ಪತ್ರೆ, ಕುಂದಾಪುರ | ಎಂಡಿಎಸ್(ಕನ್ಸರ್‌ವೇಟಿವ್ ಡೆಂಟಿಸ್ಟ್ರಿ) | ಬಾಪೂಜಿ ಡೆಂಟಲ್ ಕಾಲೇಜ್, ದಾವಣಗೆರೆ |
| 10 | ಡಾ: ಮಹೇಶ್. ಟಿ. ಭಜಂತ್ರಿ<br>ಸಮುದಾಯ ಆರೋಗ್ಯ ಕೇಂದ್ರ, ಹಾನಗಲ್, ಹಾವೇರಿ ಜಿಲ್ಲೆ. | ಎಂಡಿಎಸ್ (ಪಿಡೋಡಾಂಶಿಯಾ) | ಕಾಲೇಜ್ ಆಫ್ ಡೆಂಟಲ್ ಸೈನ್ಸ್, ದಾವಣಗೆರೆ. |
| 11 | ಡಾ: ರಾಜು.ಬಿ. ರಾಂಪುರ್<br>ಸಾರ್ವಜನಿಕ ಆಸ್ಪತ್ರೆ, ಸೇಡಂ, ಯಾದಗಿರಿ ಜಿಲ್ಲೆ. | ಎಂಡಿಎಸ್(ಓರಲ್ ಮೆಡಿಸನ್) | ಸರ್ಕಾರಿ ದಂತ ಕಾಲೇಜು ಮತ್ತು ಸಂಶೋಧನಾ ಸಂಸ್ಥೆ, ಬೆಂಗಳೂರು |

**ಐ. ಹೇಮನಾಥ್**
ಸರ್ಕಾರದ ಅಧೀನ ಕಾರ್ಯದರ್ಶಿ
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.
(ಸೇವೆಗಳು-1)

ಪಿ. ಆರ್. 1338

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

ಅಧಿಸೂಚನೆ

**ಸಂಖ್ಯೆ: ಆಕುಕ 265 ಹೆಚ್‌ಎಸ್‌ಹೆಚ್ 2010 ಬೆಂಗಳೂರು, ದಿನಾಂಕ: 22.05.2010**

**ವಿಷಯ** : 2010-11 ನೇ ಸಾಲಿನಲ್ಲಿ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ವೈದ್ಯಾಧಿಕಾರಿಗಳನ್ನು ಸೇವಾನಿರತ ಸ್ನಾತಕೋತ್ತರ ವ್ಯಾಸಂಗಕ್ಕೆ ನಿಯೋಜಿಸುವ ಬಗ್ಗೆ.

**ಉಲ್ಲೇಖ :** 1. ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು ಇವರ ಪತ್ರ ಸಂಖ್ಯೆ: ಜೆಆರ್ಒ(ಎಂ)48/2009-10 ದಿನಾಂಕ: 21/05/2010

2. ರಾಜೀವ್ ಗಾಂಧಿ ಆರೋಗ್ಯ ವಿಜ್ಞಾನಗಳ ವಿಶ್ವವಿದ್ಯಾಲಯ, ಬೆಂಗಳೂರುರವರ ಪತ್ರ ಸಂಖ್ಯೆ:ಪಿಜಿಇಟಿ-10/ಕೌನ್ಸಿಲಿಂಗ್/01-2010-11 ದಿನಾಂಕ: 21/05/2010

1. ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿ ಕಾರ್ಯನಿರ್ವಹಿಸುತ್ತಿರುವ ಸೇವಾನಿರತ ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿಗಳು 2010-11ನೇ ಸಾಲಿನ ಸ್ನಾತಕೋತ್ತರ ವ್ಯಾಸಂಗಕ್ಕಾಗಿ ಅರ್ಜಿ ಸಲ್ಲಿಸಿ, ಕುಲಸಚಿವರು, ರಾಜೀವ್ ಗಾಂಧಿ ಆರೋಗ್ಯ ವಿಜ್ಞಾನಗಳ ವಿಶ್ವವಿದ್ಯಾನಿಲಯ, ಬೆಂಗಳೂರು ಇವರು ಉಲ್ಲೇಖ-2 ರಲ್ಲಿ ಕೌನ್ಸಿಲಿಂಗ್ ಮೂಲಕ ಆಯ್ಕೆ ಮಾಡಿರುವಂತೆ, ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಇವರು ಆಯ್ಕೆ ಪಟ್ಟಿಯೊಂದಿಗೆ ಉಲ್ಲೇಖ-1 ರಲ್ಲಿ ಕಳುಹಿಸಿರುವ ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೂಡಲೇ ಜಾರಿಗೆ ಬರುವಂತೆ ಈ ಅಧಿಸೂಚನೆಯ ಅನುಬಂಧದಲ್ಲಿರುವ 67 ವೈದ್ಯಾಧಿಕಾರಿಗಳನ್ನು ಅವರುಗಳ ಹೆಸರಿನ ಮುಂದೆ ನಮೂದಿಸಿರುವ ವಿಷಯ ಮತ್ತು ಕಾಲೇಜುಗಳಿಗೆ ನಿಯೋಜಿಸಲಾಗಿದೆ.

2. ಸಂಬಂಧಿಸಿದ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳು/ಜಿಲ್ಲಾ ಶಸ್ತ್ರ ಚಿಕಿತ್ಸಕರು ಮತ್ತು ಸಂಬಂಧಿಸಿದ ಮೇಲಾಧಿಕಾರಿಗಳು ಕರ್ನಾಟಕ ಸರ್ಕಾರಿ ಸೇವಾ ನಿಯಮಗಳಲ್ಲಿ ನಿಗದಿಪಡಿಸಿರುವಂತೆ ಹಾಗೂ ಪ್ರಸ್ತುತ ಜಾರಿಯಲ್ಲಿರುವ ನಿಯಮಗಳಂತೆ ನಮೂನೆ 19 ಮತ್ತು 19-ಎ ಹಾಗೂ ಪೆನಾಲ್ಟಿ ಬಾಂಡ್ ಪಡೆದು ಕೂಡಲೇ ಕರ್ತವ್ಯದಿಂದ ಬಿಡುಗಡೆ ಮಾಡುವ ಬಗ್ಗೆ ಕ್ರಮ ತೆಗೆದುಕೊಳ್ಳುವುದು.

3. ಈ ಅಧಿಸೂಚನೆಯ ಅನುಬಂಧದಲ್ಲಿ ತಿಳಿಸಿರುವ ಸ್ನಾತಕೋತ್ತರ ವ್ಯಾಸಂಗಕ್ಕೆ ಆಯ್ಕೆಯಾಗಿರುವ ಸೇವಾನಿರತ ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿಗಳು ಸ್ನಾತಕೋತ್ತರ ಕೋರ್ಸಿಗೆ ಪ್ರವೇಶ ಪಡೆದ ನಂತರ ವ್ಯಾಸಂಗದ ರಜೆ ಅಥವಾ ಪ್ರತಿನಿಯೋಜನಾ ರಿಯಾಯತಿ ಸೌಲಭ್ಯ ಮಂಜೂರಾತಿಗೆ ಸಂಬಂಧಿಸಿದಂತೆ ಸರ್ಕಾರವು ಪ್ರತ್ಯೇಕವಾಗಿ ಪರಿಶೀಲಿಸಿ ಷರತ್ತು ಮತ್ತು ನಿಬಂಧನೆಗಳನ್ನು ಹೊರಡಿಸುವ ಬಗ್ಗೆ ಕ್ರಮ ತೆಗೆದುಕೊಳ್ಳಲಾಗುವುದು. ಸ್ನಾತಕೋತ್ತರ ಕೋರ್ಸಿಗೆ ಪ್ರವೇಶ ಪಡೆದ ದಿನಾಂಕದಿಂದ ಜಾರಿಗೆ ಬರುವಂತೆ ಸರ್ಕಾರದ ಮಂಜೂರಾತಿ ಇಲ್ಲದೇ ಈ ಅಭ್ಯರ್ಥಿಗಳು ವೇತನ/ರಜೆಯ ವೇತನ ಪಡೆಯಲು ಅವಕಾಶವಿರುವುದಿಲ್ಲ.

4. 2010–11 ನೇ ಸಾಲಿನಲ್ಲಿ ಸ್ನಾತಕೋತ್ತರ ವ್ಯಾಸಂಗಕ್ಕೆ ಆಯ್ಕೆಯಾದ ಈ ಅಧಿಸೂಚನೆಯ ಅನುಬಂಧದಲ್ಲಿ ತಿಳಿಸಿರುವ ಸೇವಾನಿರತ ವೈದ್ಯರು ಸಂಬಂಧಪಟ್ಟ ವೈದ್ಯಕೀಯ ಕಾಲೇಜುಗಳಲ್ಲಿ ಸ್ನಾತಕೋತ್ತರ ಕೋರ್ಸು ಪ್ರಾರಂಭವಾಗುವವರೆಗೆ ಕರ್ತವ್ಯ ನಿರ್ವಹಿಸುತ್ತಿದ್ದ ಸ್ಥಳದಲ್ಲಿ ಮುಂದುವರಿಯುವುದು ಹಾಗೂ ತದನಂತರ ಕರ್ತವ್ಯದಿಂದ ಬಿಡುಗಡೆಗೊಳ್ಳತಕ್ಕದ್ದು. ಸಂಬಂಧಿಸಿದ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳು ಹಾಗೂ ಸಂಬಂಧಿಸಿದ ಮೇಲಾಧಿಕಾರಿಗಳು ಅದರಂತೆ ಕ್ರಮ ತೆಗೆದುಕೊಳ್ಳಬೇಕೆಂದು ಆದೇಶಿಸಲಾಗಿದೆ.

5. ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 693 ವೆಚ್ಚ–5 : 2008 ದಿನಾಂಕ: 31–05–2008 ರಲ್ಲಿ 5 ವರ್ಷಕ್ಕಿಂತ ಕಡಿಮೆ ಹಾಗೂ 3 ವರ್ಷ ಮೇಲ್ಪಟ್ಟು ಸರ್ಕಾರಿ ಸೇವೆ ಸಲ್ಲಿಸಿರುವ ಸೇವಾನಿರತ ಸ್ನಾತಕೋತ್ತರ ವ್ಯಾಸಂಗ ನಡೆಸುತ್ತಿರುವ ವೈದ್ಯಾಧಿಕಾರಿಗಳಿಂದ ಪರಿಷ್ಕೃತ ಕರಾರು ಬಂಧ ಪತ್ರವನ್ನು ಪಡೆಯುವ ಷರತ್ತಿಗೊಳಪಟ್ಟು ನೀಡಿರುವ ಸಹಮತಿಯೊಂದಿಗೆ ಹೊರಡಿಸಿದೆ.

6. ಸ್ನಾತಕೋತ್ತರ ವ್ಯಾಸಂಗಕ್ಕೆ ಸಂಬಂಧಿಸಿದಂತೆ ಕರ್ನಾಟಕ ಆಡಳಿತ ನ್ಯಾಯ ಮಂಡಳಿ/ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ ಸಲ್ಲಿಸಿರುವ ಅರ್ಜಿಯ ಮೇಲಿನ ಅಂತಿಮ ತೀರ್ಮಾನಕ್ಕೆ ಈ ಆದೇಶವು ಒಳಪಟ್ಟಿರುತ್ತದೆ.

ಈ ಅಧಿಸೂಚನೆಯನ್ನು ಸರ್ಕಾರಿ ಆದೇಶ ಸಂಖ್ಯೆ: ಆಇ 02 ಎಸ್ಆರ್ಎ 2008 ದಿನಾಂಕ: 05–06–2008 ರಲ್ಲಿ ಇಲಾಖಾ ಪ್ರಧಾನ ಕಾರ್ಯದರ್ಶಿಯವರಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಐ. ಹೇಮನಾಥ್**
ಸರ್ಕಾರದ ಅಧೀನ ಕಾರ್ಯದರ್ಶಿ
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ
(ಸೇವೆಗಳು–1)

**ಅನುಬಂಧ**

**2010–11 ನೇ ಸಾಲಿಗೆ ಸ್ನಾತಕೋತ್ತರ ವ್ಯಾಸಂಗಕ್ಕಾಗಿ ಆಯ್ಕೆ ಹೊಂದಿರುವ ಸೇವಾ ನಿರತ ವೈದ್ಯರುಗಳ ವಿವರ**

| ಕ್ರ ಸಂ. | ವೈದ್ಯರ ಹೆಸರು ಮತ್ತು ಕಾರ್ಯನಿರತ ಸ್ಥಳ | ಆಯ್ಕೆ ಮಾಡಿಕೊಂಡಿರುವ ವಿಷಯ | ಆಯ್ಕೆ ಮಾಡಿಕೊಂಡಿರುವ ವೈದ್ಯಕೀಯ ವಿದ್ಯಾಲಯ |
|---|---|---|---|
| 1 | ಡಾ: ರೇಖಾ ಸಿ.<br>ಚಾಮರಾಜೇಂದ್ರ ಆಸ್ಪತ್ರೆ, ಹಾಸನ | ಎಂಡಿ ಆರ್‌ಡಿ | ಬೆಂಗಳೂರು ವೈದ್ಯಕೀಯ ಮಹಾವಿದ್ಯಾಲಯ, ಬೆಂಗಳೂರು |
| 2 | ಡಾ: ನರಸಿಂಹಮೂರ್ತಿ ಎನ್.<br>ಪ್ರಾ.ಆ.ಕೇಂದ್ರ, ಗೊಟ್ಟಿಗೆರೆ, ಬೆಂ.ದ. ತಾ: ಬೆಂಗಳೂರು ನಗರ ಜಿಲ್ಲೆ | ಎಂ.ಎಸ್.ಆರ್ಥೋ | ಬೆಂಗಳೂರು ವೈದ್ಯಕೀಯ ಮಹಾವಿದ್ಯಾಲಯ, ಬೆಂಗಳೂರು |
| 3 | ಡಾ: ವಿಶ್ವನಾಥಗೌಡ ಎಂ.ಜಿ.<br>ಸಾ.ಆ.ಇಂದಿರಾನಗರ, ಹಳೇ ಮದ್ರಾಸ್ ರಸ್ತೆ, ಬೆಂಗಳೂರು | ಎಂಡಿ. ಪಿಡಿಯಾ | ಬೆಂಗಳೂರು ವೈದ್ಯಕೀಯ ಮಹಾವಿದ್ಯಾಲಯ, ಬೆಂಗಳೂರು |
| 4 | ಡಾ: ರಾಜೇಶ್ವರಿ ಬಿ.ಕೆ.<br>ಜಿಲ್ಲಾ ಆಸ್ಪತ್ರೆ, ಮಡಿಕೇರಿ | ಎಂ.ಎಸ್. ಓಬಿಜಿ | ಬೆಂಗಳೂರು ವೈದ್ಯಕೀಯ ಮಹಾವಿದ್ಯಾಲಯ, ಬೆಂಗಳೂರು |
| 5 | ಡಾ: ಚೇತನ್ ಎಂ.<br>ಪ್ರಾ.ಆ.ಕೇಂದ್ರ ದೊಡ್ಡ ಅಗ್ರಹಾರ ಶಿರಾ,<br>ತಾ: ತುಮಕೂರು ಜಿಲ್ಲೆ | ಎಂಡಿ. ಸ್ಕಿನ್ & ವಿಡಿ | ಬೆಂಗಳೂರು ವೈದ್ಯಕೀಯ ಮಹಾವಿದ್ಯಾಲಯ, ಬೆಂಗಳೂರು |
| 6 | ಡಾ: ಚಂದ್ರಕಾಂತ ಎಸ್. ಜವಳಿ,<br>ಪ್ರಾ.ಆ.ಕೇಂದ್ರ, ಅಮೀನಗಡ, ಹುನಗುಂದ ತಾಲ್ಲೂಕು<br>ಬಾಗಲಕೋಟೆ ಜಿಲ್ಲೆ | ಎಂ.ಡಿ. ಜಿಎಂ | ಬೆಂಗಳೂರು ವೈದ್ಯಕೀಯ ಮಹಾವಿದ್ಯಾಲಯ, ಬೆಂಗಳೂರು |
| 7 | ಡಾ: ವಿಶ್ವನಾಥ ಎಸ್.ಎಂ. ಸಾಲಿಮಠ ಪ್ರಾ.ಆ.ಕೇಂದ್ರ, ಮುಳಗುಂದ,<br>ಗದಗ ತಾ: ಜಿಲ್ಲೆ | ಎಂ.ಡಿ. ಜಿಎಂ | ಬೆಂಗಳೂರು ವೈದ್ಯಕೀಯ ಮಹಾವಿದ್ಯಾಲಯ, ಬೆಂಗಳೂರು |

| | | | |
|---|---|---|---|
| 8 | ಡಾ: ಭಾಗ್ಯಲಕ್ಷ್ಮೀ. ಕೆ<br>(ಡಿಓಎಂಎಸ್ 30/04/2005)<br>ನೇತ್ರ ತಜ್ಞರು, ಜಿಲ್ಲಾ ಸರ್ಕಾರಿ ಮೆಗ್ಗಾನ್ ಆಸ್ಪತ್ರೆ, ಶಿವಮೊಗ್ಗ | ಎಂ.ಎಸ್. ನೇತ್ರ | ಬೆಂಗಳೂರು ವೈದ್ಯಕೀಯ ಮಹಾವಿದ್ಯಾಲಯ, ಬೆಂಗಳೂರು |
| 9 | ಡಾ: ನರಸಿಂಹಮೂರ್ತಿ ಡಿ.ಆರ್.<br>ಡಿಟಿಓ, ಚಿಕ್ಕಬಳ್ಳಾಪುರ | ಎಂಎಸ್ ಜಿಎಸ್ | ಬೆಂಗಳೂರು ವೈದ್ಯಕೀಯ ಮಹಾವಿದ್ಯಾಲಯ, ಬೆಂಗಳೂರು |
| 10 | ಡಾ: ಅನಿಲ ಎಸ್. ಕಾನಡೆ,<br>ಪ್ರಾ.ಆ.ಕೇಂದ್ರ, ಮದಭಾವಿ, ಬೆಳಗಾಂ | ಡಿಎಂಆರ್‌ಡಿ | ಬೆಂಗಳೂರು ವೈದ್ಯಕೀಯ ಮಹಾವಿದ್ಯಾಲಯ, ಬೆಂಗಳೂರು |
| 11 | ಡಾ: ಶ್ರೀನಿವಾಸ ಬಿ.ಜಿ.<br>ಸಾ.ಆ. ಹೊಸಕೋಟೆ, ಬೆಂಗಳೂರು ಗ್ರಾ. | ಎಂ.ಎಸ್ ಜಿ.ಎಸ್ | ಬೆಂಗಳೂರು ವೈದ್ಯಕೀಯ ಮಹಾವಿದ್ಯಾಲಯ, ಬೆಂಗಳೂರು |
| 12 | ಡಾ: ಮಂಜನಾಯ್ಕ,<br>ಪ್ರಾ.ಆ.ಕೇಂದ್ರ, ಕೊಂಡಜ್ಜಿ, ಹರಿಹರ ತಾ:<br>ದಾವಣಗೆರೆ ಜಿಲ್ಲೆ | ಎಂಎಸ್ ಜಿಎಸ್ | ಬೆಂಗಳೂರು ವೈದ್ಯಕೀಯ ಮಹಾವಿದ್ಯಾಲಯ, ಬೆಂಗಳೂರು |
| 13 | ಶೋಭಾ ಎಂ.ಜೆ.<br>ಪ್ರಾ.ಆ.ಕೇಂದ್ರ, ಕೆ. ಹೊನ್ನಲಗೆರೆ, ಮದ್ದೂರು ತಾ: ಮಂಡ್ಯ ಜಿಲ್ಲೆ | ಡಿಜಿಓ | ಬೆಂಗಳೂರು ವೈದ್ಯಕೀಯ ಮಹಾವಿದ್ಯಾಲಯ, ಬೆಂಗಳೂರು |
| 14 | ಡಾ: ಗಿರೀಶ್ ಆರ್.<br>(ಡಿವಿಡಿ– 30/10/2000) ಜಿಲ್ಲಾ ಆಸ್ಪತ್ರೆ, ಚಾಮರಾಜನಗರ | ಎಂಡಿ. ಪೆಥಾ | ಬೆಂಗಳೂರು ವೈದ್ಯಕೀಯ ಮಹಾವಿದ್ಯಾಲಯ, ಬೆಂಗಳೂರು |
| 15 | ಡಾ: ಶಿವರಾಮಕೃಷ್ಣ ಎಂ.ಡಿ.<br>ಪ್ರಾ.ಆ.ಕೇಂದ್ರ, ಕೀಳನಪುರ, ಮೈಸೂರು ತಾ: ಜಿಲ್ಲೆ | ಎಂ.ಡಿ. ಫಾರ್ಮ | ಬೆಂಗಳೂರು ವೈದ್ಯಕೀಯ ಮಹಾವಿದ್ಯಾಲಯ, ಬೆಂಗಳೂರು |
| 16 | ಡಾ: ಮಂಜುಳಾ ದೇವಿ ಎಂ.<br>ಪ್ರಾ.ಆ.ಕೇಂದ್ರ, ಶಿವಗಂಗೆ, ನೆಲಮಂಗಲ ತಾ: ಬೆಂ. ಗ್ರಾ ಜಿಲ್ಲೆ | ಎಂ.ಎಸ್.ಇಎನ್‌ಟಿ | ಬೆಂಗಳೂರು ವೈದ್ಯಕೀಯ ಮಹಾವಿದ್ಯಾಲಯ, ಬೆಂಗಳೂರು |
| 17 | ಡಾ: ಸುಮಿತ್ರ. ಕೆ.<br>ಜಿಲ್ಲಾ ಆಸ್ಪತ್ರೆ, ರಾಮನಗರ | ಡಿಎ | ಬೆಂಗಳೂರು ವೈದ್ಯಕೀಯ ಮಹಾವಿದ್ಯಾಲಯ, ಬೆಂಗಳೂರು |
| 18 | ಡಾ: ರಾಜು ಜಿ.<br>ಪ್ರಾ.ಆ.ಕೇಂದ್ರ. ಹಾಲೇನಹಳ್ಳಿ, ದೊಡಬಳ್ಳಾಪುರ ತಾಲ್ಲೂಕು,<br>ಬೆಂ.ಗ್ರಾ. | ಎಂಡಿ ಅನೆಸ್ಥಿ | ಬೆಂಗಳೂರು ವೈದ್ಯಕೀಯ ಮಹಾವಿದ್ಯಾಲಯ, ಬೆಂಗಳೂರು |
| 19 | ಡಾ: ವಿದ್ಯಾ ಶಂಕರಪ್ಪ ಯಡದಳ್ಳಿ,<br>ಸಾ.ಆ. ಬೈಲಹೊಂಗಲ, ಬೆಳಗಾಂ ಜಿಲ್ಲೆ | ಎಂಎಸ್ ಓಬಿಜಿ | ಕಿಮ್ಸ್, ಹುಬ್ಬಳ್ಳಿ |
| 20 | ಡಾ: ಮಕಾನದಾರ ಆರ.ಎ.<br>ಪ್ರಾ.ಆ.ಕೇಂದ್ರ, ಕರಗಾಂವ, ಚಿಕ್ಕೋಡಿ, ಬೆಳಗಾಂ | ಎಂಡಿಜಿಎಂ | ಕಿಮ್ಸ್, ಹುಬ್ಬಳ್ಳಿ |
| 21 | ಡಾ: ರೇಖಾ ಎಸ್.<br>ಬಿಬಿಎಂಪಿ | ಎಂ.ಡಿ. ಕಮ್ಯೂನಿಟಿ ಮೆಡಿಸಿನ್ | ಕಿಮ್ಸ್, ಬೆಂಗಳೂರು |
| 22 | ಡಾ: ಗಿರೀಶ್ ಆರ್.<br>ಪ್ರಾ.ಆ.ಕೇಂದ್ರ, ಸೋಲೂರು, ಮಾಗಡಿ ತಾ; ರಾಮನಗರ ಜಿಲ್ಲೆ | ಎಂ.ಎಸ್.ಜಿ.ಎಸ್ | ಕಿಮ್ಸ್, ಹುಬ್ಬಳ್ಳಿ |
| 23 | ಡಾ: ಚಿಲ್ಲೂರ ಮಠ ಆರ್. ಆರ್. (ಡಿಓಎಂಎಸ್ 28/3/2003)<br>ಜಿಲ್ಲಾ ಆಸ್ಪತ್ರೆ ಬಾಗಲಕೋಟೆ | ಡಿಜಿಓ | ಕಿಮ್ಸ್, ಹುಬ್ಬಳ್ಳಿ |
| 24 | ಡಾ: ಕಲಾವತಿ ಎಸ್.ಡಿ. ಸಾಂಕ್ರಾಮಿಕ ರೋಗಗಳ ಆಸ್ಪತ್ರೆ,<br>ಮೈಸೂರು | ಡಿಜಿಓ | ಕಿಮ್ಸ್, ಹುಬ್ಬಳ್ಳಿ |
| 25 | ಡಾ: ಪುಡಕಲಕಟ್ಟಿ ಎನ್.ಎಂ. (ಡಿಪ್ಲೋಮೋ ಇಎನ್‌ಟಿ<br>03/08/94) ಜಿಲ್ಲಾ ಆಸ್ಪತ್ರೆ, ಗದಗ. | ಎಂ.ಡಿ.ಜಿ.ಎಂ | ಕಿಮ್ಸ್, ಹುಬ್ಬಳ್ಳಿ |
| 26 | ಡಾ:ಬಾಬು ಮಹೇಂದ್ರ ಪ್ರಸಾದ್.ಎನ್<br>ಸಾ.ಆ.ಕೆ.ಆರ್.ಪುರಂ. ಬೆಂ.ನಗರ ಜಿಲ್ಲೆ | ಎಂಡಿ ಪೆಥಾ | ಕಿಮ್ಸ್, ಬೆಂಗಳೂರು |

| | | | |
|---|---|---|---|
| 27 | ಡಾ: ಈಶ್ವರಪ್ಪ ಎಂ.<br>ಜಿಲ್ಲಾ ಕ್ಷ.ನಿ.ಕೇಂದ್ರ, ಉ.ಕ. ಕಾರವಾರ | ಎಂಎಸ್‌ಜಿಎಸ್ | ಕಿಮ್ಸ್, ಬೆಂಗಳೂರು |
| 28 | ಡಾ: ಸ್ವಾಮಿ.ಎಂ.ಎನ್<br>ತಾ.ಆ.ಅ.ತಿಪಟೂರು ತಾ: ತುಮಕೂರು ಜಿಲ್ಲೆ | ಎಂಡಿ ಆರ್‌ಡಿ | ಜೆ.ಜೆ. ಮೆಡಿಕಲ್ ಕಾಲೇಜ್, ದಾವಣಗೆರೆ |
| 29 | ವಸಂತಲಕ್ಷ್ಮೀ ಎ.ವಿ.<br>ಸಾ.ಆ. ಪಾಂಡವಪುರ, ಮಂಡ್ಯ ಜಿಲ್ಲೆ | ಎಂಎಸ್ ಓಬಿಜಿ | ಜೆ.ಜೆ. ಮೆಡಿಕಲ್ ಕಾಲೇಜ್, ದಾವಣಗೆರೆ |
| 30 | ಡಾ: ಕಿರಣ್ ಎಸ್.ಹೆಚ್.<br>ಜಿಲ್ಲಾ ಆಸ್ಪತ್ರೆ, ದಾವಣಗೆರೆ | ಎಂ.ಎಸ್.ಆಪ್ತಾಲ್ | ಜೆ.ಜೆ. ಮೆಡಿಕಲ್ ಕಾಲೇಜ್, ದಾವಣಗೆರೆ |
| 31 | ಡಾ: ಪುರುಷೋತ್ತಮ<br>ಪ್ರಾ.ಆ.ಕೇಂದ್ರ, ನೇರಳೇಕೆರೆ, ತುಮಕೂರು ಜಿಲ್ಲೆ. | ಎಂ.ಡಿ ಜಿ.ಎಂ | ಜೆ.ಜೆ. ಮೆಡಿಕಲ್ ಕಾಲೇಜ್, ದಾವಣಗೆರೆ |
| 32 | ಡಾ: ರೇವಣ್ಣ. ಎಂ<br>ಪ್ರಾ.ಆ.ಕೇಂದ್ರ, ಅಡಗೂರು, ಕೆ.ಆರ್.ನಗರ<br>ತಾ: ಮೈಸೂರು ಜಿಲ್ಲೆ | ಎಂಎಸ್‌ಜಿಎಸ್ | ಜೆ.ಜೆ. ಮೆಡಿಕಲ್ ಕಾಲೇಜ್, ದಾವಣಗೆರೆ |
| 33 | ಡಾ: ಮಂಜುನಾಥ ಎಂ.ಡಿ.<br>ಸ.ಆ.ಕೇಂದ್ರ, ಬನ್ನೂರು, ಟಿ.ನರಸೀಪುರ<br>ತಾ: ಮೈಸೂರು ಜಿಲ್ಲೆ. | ಡಿಎಂಆರ್‌ಡಿ | ಜೆ.ಜೆ. ಮೆಡಿಕಲ್ ಕಾಲೇಜ್, ದಾವಣಗೆರೆ |
| 34 | ಡಾ: ರಾಜಲಕ್ಷ್ಮೀ.ವಿ. (ಅರವಳಿಕೆ 15/09/2004) ಜಿಲ್ಲಾ ಆಸ್ಪತ್ರೆ, ಬೆಳಗಾಂ | ಎಂ.ಡಿ ಅನೇಸ್ಥೆ | ಜೆ.ಜೆ. ಮೆಡಿಕಲ್ ಕಾಲೇಜ್, ದಾವಣಗೆರೆ |
| 35 | ಡಾ: ಹೊಸಮನಿ ಶಾಂತ ಶಿವಪ್ಪ.<br>ಚಿಗಟೇರಿ ಜಿಲ್ಲಾ ಆಸ್ಪತ್ರೆ, ದಾವಣಗೆರೆ | ಎಂಡಿ ಪೆಥಾ | ಜೆ.ಜೆ. ಮೆಡಿಕಲ್ ಕಾಲೇಜ್, ದಾವಣಗೆರೆ |
| 36 | ಡಾ: ಮೋಹನ್ ಕುಮಾರ್. ಎ<br>ಪ್ರಾ.ಆ.ಕೇಂದ್ರ, ಬನ್ನಿತಾಳಪುರ, ಗುಂಡ್ಲುಪೇಟೆ ತಾ:<br>ಚಾಮರಾಜನಗರ. | ಎಂ.ಡಿ.ಜಿ.ಎಂ | ಎಂ.ಎಂಸಿ. ಮೈಸೂರು |
| 37 | ಡಾ: ಶಿವಕಿರಣ್ ಸಿ.ಎಸ್.<br>ಪ್ರಾ.ಆ.ಕೇಂದ್ರ, ಹೊನ್ನೂರು, ದಾವಣಗೆರೆ | ಎಂ.ಡಿ.ಪಿಡಿಯಾ | ಎಂ.ಎಂಸಿ. ಮೈಸೂರು |
| 38 | ಡಾ: ಜೈಪ್ರಕಾಶ್ ಹೆಚ್.ಆರ್.<br>ಪ್ರಾ.ಆ.ಕೇಂದ್ರ, ಬರಗ, ಚಾ.ರಾ.ನಗರ ಜಿಲ್ಲೆ | ಎಂ.ಎಸ್ ಜಿ.ಎಸ್ | ಎಂ.ಎಂಸಿ. ಮೈಸೂರು |
| 39 | ಡಾ: ನವೀನ್ ಚಂದ್ರ. ಎಸ್<br>ಪ್ರಾ.ಆ.ಕೇಂದ್ರ, ಬೆಳ್ಳಾಳೆ ಪಾಂಡವಪುರ ತಾ: ಮಂಡ್ಯ | ಎಂ.ಎಸ್ ಓಬಿಜಿ | ಎಂ.ಎಂಸಿ. ಮೈಸೂರು |
| 40 | ಡಾ: ಪೂರ್ಣಿಮಾ.ಎ.ಎಸ್<br>ಪ್ರಾ.ಆ.ಕೇಂದ್ರ ವಿಶ್ವೇಶ್ವರನಗರ, ಮೈಸೂರು | ಡಿಜಿಓ | ಎಂ.ಎಂಸಿ. ಮೈಸೂರು |
| 41 | ಡಾ: ಹರಿಲಾಲ್‌ನಾಯಕ್ ಎಂ.ಎಲ್.<br>ಸ.ಆ.ಕೇಂದ್ರ, ಹಿರೀಸಾವೆ, ಚನ್ನರಾಯಪಟ್ಟಣ ತಾ: ಹಾಸನ ಜಿಲ್ಲೆ | ಎಂಡಿ ಅನೇಸ್ಥೆ | ಎಂ.ಎಂಸಿ. ಮೈಸೂರು |
| 42 | ಡಾ: ಆನಂದಕುಮಾರ್ ವಿ.<br>ಪ್ರಾ.ಆ.ಕೇಂದ್ರ, ಬೀರುಂಡಿ, ಮೈಸೂರು ತಾ: | ಎಂ.ಎಸ್.ಜಿ.ಎಸ್ | ಎಂ.ಎಂಸಿ. ಮೈಸೂರು |
| 43 | ಡಾ: ಜಯಮಾಲ.ವಿ<br>ಗಿರಿಯಾ ಬೋವಿಪಾಳ್ಯ, ಆರೋಗ್ಯ ಕೇಂದ್ರ, ಮೈಸೂರು | ಡಿಸಿಹೆಚ್ | ಎಂ.ಎಂಸಿ. ಮೈಸೂರು |
| 44 | ಡಾ: ಯಶರಾಜ್ ಜಿ.<br>ಪ್ರಾ.ಆ.ಕೇಂದ್ರ, ಹುಣಸನಹಳ್ಳಿ ರಾಮನಗರ ಜಿಲ್ಲೆ | ಎಂ.ಡಿ.ಪೆಥಾ | ಎಂ.ಎಂಸಿ. ಮೈಸೂರು |

| | | | |
|---|---|---|---|
| 45 | ಡಾ: ಬಿರಾದಾರ ಪಾಟೀಲ ಬಿ.ವಿ.<br>ಪ್ರಾ.ಆ.ಕೇಂದ್ರ ಕಸಬಾಜಂಬಗಿ, ಮುಧೋಳ ತಾ: ಬಾಗಲಕೋಟೆ ಜಿಲ್ಲೆ | ಎಂ.ಎಸ್.ಆರ್ಥೋ | ವಿಮ್ಸ್, ಬಳ್ಳಾರಿ |
| 46 | ಡಾ: ಸುಧಾರಾಣಿ ಸಿ.ಎನ್. (ಡಿಜಿಓ, 23/04/97) | ಎಂ.ಎಸ್. ಓಬಿಜಿ | ವಿಮ್ಸ್, ಬಳ್ಳಾರಿ |
| 47 | ಡಾ: ಕಿರಣ ವಿ. ಕುಲಕರ್ಣಿ,<br>ಸಾ.ಆ. ಸಿರ್ಸಿ, ಉ.ಕ. | ಎಂ.ಡಿ.ಜಿ.ಎಂ. | ವಿಮ್ಸ್, ಬಳ್ಳಾರಿ |
| 48 | ಡಾ: ಪ್ರತೀಬಾ. ಎಂ.ಎಸ್<br>ಪ್ರಾ.ಆ.ಕೇಂದ್ರ, ಅಕ್ಕೂರು ಹೊಸಹಳ್ಳಿ, ಚನ್ನಪಟ್ಟಣ ತಾ: ರಾಮನಗರ ಜಿಲ್ಲೆ | ಎಂ.ಎಸ್.ಜಿ.ಎಸ್ | ವಿಮ್ಸ್, ಬಳ್ಳಾರಿ |
| 49 | ಡಾ: ಮುರಳೀಧರ್.ವಿ<br>ಪ್ರಾ.ಆ.ಕೇಂದ್ರ, ಕವಲೂರು, ಕೊಪ್ಪಳ ಜಿಲ್ಲೆ. | ಎಂ.ಡಿ ಜಿ.ಎಂ | ವಿಮ್ಸ್, ಬಳ್ಳಾರಿ |
| 50 | ಡಾ: ಭಾನುರೇಖಾ ಈ.<br>ಚಿಗಟೇರಿ ಜಿಲ್ಲಾ ಆಸ್ಪತ್ರೆ. ದಾವಣಗೆರೆ | ಎಂ.ಎಸ್.ಆಪ್ತಾಲ್ | ವಿಮ್ಸ್, ಬಳ್ಳಾರಿ |
| 51 | ಡಾ: ಶುಭ ಕೆ.ಜೆ.<br>ಸ.ಆ.ಕೇಂದ್ರ, ಬನ್ನೂರು, ಟಿ.ನರಸೀಪುರ ತಾ: ಮೈಸೂರು | ಎಂ.ಡಿ ಜಿ.ಎಂ | ಎಂಎಸ್ ರಾಮಯ್ಯ,<br>ಮೆಡಿಕಲ್ ಕಾಲೇಜು, ಬೆಂಗಳೂರು |
| 52 | ಡಾ: ಬಸ್ತಿ ಸುನೀತ ದೇವೇಂದ್ರ, (ಡಿಜಿಓ 23/11/99) ಪ್ರಾ.ಆ.ಕೇಂದ್ರ, ಬಾಣಾವರ, ಅರಸೀಕೆರೆ ತಾ: ಹಾಸನಜಿಲ್ಲೆ | ಎಂಎಸ್‌ಜಿಎಸ್ | ಎಂಎಸ್ ರಾಮಯ್ಯ,<br>ಮೆಡಿಕಲ್ ಕಾಲೇಜು, ಬೆಂಗಳೂರು |
| 53 | ಡಾ: ಸುಮ ಕೆ.ಎಸ್.<br>ಪ್ರಾ.ಆ.ಕೇಂದ್ರ, ಎಂ.ಜಿ.ಪಾಳ್ಯ, ರಾಮನಗರ ಜಿಲ್ಲೆ | ಡಿಜಿಓ | ಎಂಎಸ್ ರಾಮಯ್ಯ,<br>ಮೆಡಿಕಲ್ ಕಾಲೇಜು, ಬೆಂಗಳೂರು |
| 54 | ಡಾ: ರೇಖಾ ಎನ್.<br>ಆರೋಗ್ಯ ಕೇಂದ್ರ, ಕೋರಮಂಗಲ, ಬಿಬಿಎಂಪಿ | ಎಂ.ಡಿ. ಪೆಥಾ | ಎಂಎಸ್ ರಾಮಯ್ಯ,<br>ಮೆಡಿಕಲ್ ಕಾಲೇಜು, ಬೆಂಗಳೂರು |
| 55 | ಡಾ: ಹರಿಪ್ರಸಾದ್.ಸಿ.<br>2002 ಖಜ ಂಠಿಠಿಡಿಣಜಾ ಪ್ರಾ.ಆ.ಕೇಂದ್ರ. ಮಿರಲೆ, ಮೈಸೂರು ಜಿಲ್ಲೆ. | ಎಂ.ಎಸ್.ಆರ್ಥೋ | ಕಸ್ತೂರ್ ಬಾ ವೈದ್ಯಕೀಯ<br>ಮಹಾವಿದ್ಯಾಲಯ, ಮಂಗಳೂರು |
| 56 | ಡಾ: ನಿವೇದಿತಾ ಆರ್.<br>ಪ್ರಾ.ಆ.ಕೇಂದ್ರ. ಉದಯಪುರ. ಹಾಸನಜಿಲ್ಲೆ | ಎಂ.ಡಿ.ಪೀಡಿಯಾ | ಕೆ.ವಿ.ಜಿ. ಮೆಡಿಕಲ್ ಕಾಲೇಜ್, ಸೂಳ್ಯ |
| 57 | ಡಾ: ಸುರೇಶ ಗುಂಡಪಲ್ಲಿ,<br>ಸ.ಆ.ಕೇಂದ್ರ, ಬ್ಯಾಡಗಿ, ಹಾವೇರಿ ಜಿಲ್ಲೆ | ಎಂ.ಡಿ ಪೀಡಿಯಾ | ಇಂದಿರಾಗಾಂಧಿ ಇನ್ಸ್‌ಟಿಟ್ಯೂಟ್ ಆಫ್<br>ಚೈಲ್ಡ್ ಹೆಲ್ತ್, ಬೆಂಗಳೂರು |
| 58 | ಡಾ: ಶಶಿಕಲಾ. ಎಸ್.<br>ಆರೋಗ್ಯ ಕೇಂದ್ರ, ಕೋಡಿಹಳ್ಳಿ, ಐಪಿಪಿ 8, ಬಿಬಿಎಂಪಿ ಬೆಂಗಳೂರು | ಡಿಸಿಹೆಚ್ | ಇಂದಿರಾಗಾಂಧಿ ಇನ್ಸ್‌ಟಿಟ್ಯೂಟ್ ಆಫ್<br>ಚೈಲ್ಡ್ ಹೆಲ್ತ್, ಬೆಂಗಳೂರು |
| 59 | ಡಾ: ಸುನೀತ ಎನ್.<br>(ಡಿಪ್ಲೋಮೋ ಇನ್‌ಆಪ್ತೋ, 1/10/2000)<br>ಸಾ.ಆ. ಯಲಹಂಕ, ಬೆಂ.ನಗರ ಜಿಲ್ಲೆ | ಎಂಡಿಆರ್‌ಟಿ | ಕಿದ್ವಾಯಿ ಇನ್ಸ್‌ಟಿಟ್ಯೂಟ್ ಆಫ್ ಆಂಕಾಲಜಿ,<br>ಬೆಂಗಳೂರು |
| 60 | ಡಾ: ಬಸವಂತರಾವ ಗುಮ್ಮೆದ,<br>(ಡಿಸಿಹೆಚ್ 23/11/2001)<br>ಜಿಲ್ಲಾ ಆಸ್ಪತ್ರೆ ಬೀದರ್ | ಎಂಡಿಜಿಎಂ | ಎಂ.ಆರ್. ಮೆಡಿಕಲ್ ಕಾಲೇಜ್, ಗುಲ್ಬರ್ಗ |
| 61 | ಡಾ: ರಂಗನಾಥ್ ಎಂ.ವಿ.<br>ಪ್ರಾ.ಆ.ಘಟಕ, ತಿಪ್ಪೂರು, ಗುಬ್ಬಿ ತಾ: ತುಮಕೂರು | ಎಂ.ಎಸ್.ಜಿ.ಎಸ್ | ಎಂ.ಆರ್. ಮೆಡಿಕಲ್ ಕಾಲೇಜ್, ಗುಲ್ಬರ್ಗ |
| 62 | ಡಾ: ವಾಹಿದ್ ಖಾನ್,<br>ಶಾಸಕರ ಭವನ ಆಸ್ಪತ್ರೆ, ಬೆಂಗಳೂರು | ಎಂ.ಡಿ. ಕಮ್ಯೂನಿಟಿ<br>ಮೆಡಿಸನ್ | ಎ.ಜೆ. ಇನ್ಸ್‌ಟಿಟ್ಯೂಟ್ ಆಫ್ ಮೆಡಿಕಲ್<br>ಸೈನ್ಸಸ್, ಮಂಗಳೂರು |

| | | | |
|---|---|---|---|
| 63 | ಡಾ: ಉದಯಕುಮಾರ್ (ಅನಸ್ತೇಶಿಯಾ 31/03/2004) ಜಿಲ್ಲಾ ಆಸ್ಪತ್ರೆ, ಉಡುಪಿ | ಎಂ.ಎಸ್.ಜಿ.ಎಸ್ | ಫಾದರ್‌ಮುಲ್ಲರ್ ವೈದ್ಯಕೀಯ ಮಹಾವಿದ್ಯಾಲಯ, ಮಂಗಳೂರು |
| 64 | ಡಾ: ವಿಜಯಕುಮಾರ್ ಆರ್.<br>ಸುಧಾರಿತ ಕುಷ್ಠರೋಗ ನಿಯಂತ್ರಣ ಘಟಕ, ಆನೇಕಲ್, ಬೆಂ.ನಗರ | ಎಂಡಿಜಿಎಂ | ಫಾದರ್‌ಮುಲ್ಲರ್ ವೈದ್ಯಕೀಯ ಮಹಾವಿದ್ಯಾಲಯ, ಮಂಗಳೂರು |
| 65 | ಡಾ: ಸುನಿತ.ಎನ್.<br>ಸ.ಆ.ಕೇಂದ್ರ, ಕಬ್ಬೂರು, ಚಿಕ್ಕೋಡಿ ತಾ: ಬೆಳಗಾಂ ಜಿಲ್ಲೆ | ಎಂ.ಎಸ್.ಜಿ.ಎಸ್ | ಆದಿಚುಂಚನಗಿರಿ ಆಫ್ ಮೆಡಿಕಲ್ ಸೈನ್ಸಸ್, ಬೆಂಗಳೂರು |
| 66 | ಪ್ರಕಾಶ್ ಎಸ್, ನಾಯಕ್ ಆಗಿಆ 1998 ಸಾರ್ವಜನಿಕ ಆಸ್ಪತ್ರೆ, ಶಿರಗುಪ್ಪ ತಾ: ಬಳ್ಳಾರಿ ಜಿಲ್ಲೆ | ಎಂ.ಎಸ್.ಆಪ್ತಾಲ್ | ಆದಿಚುಂಚನಗಿರಿ ಆಫ್ ಮೆಡಿಕಲ್ ಸೈನ್ಸಸ್, ಬೆಂಗಳೂರು |
| 67 | ಡಾ: ಹೇಮರಾಜು ಜಿ.<br>ತಾ: ಆ. ಮಳವಳ್ಳಿ, ಮಂಡ್ಯ ಜಿಲ್ಲೆ | ಎಂ.ಡಿ.ಅನಸ್ಥೇ | ವೈದೇಹಿ ಇನ್‌ಸ್ಟಿಟ್ಯೂಟ್ ಆಫ್ ಮೆಡಿಕಲ್ ಸೈನ್ಸಸ್, ಬೆಂಗಳೂರು |

ಪಿ.ಆರ್. 1339

**ಐ. ಹೇಮನಾಥ್**
ಸರ್ಕಾರದ ಅಧೀನ ಕಾರ್ಯದರ್ಶಿ
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ
(ಸೇವೆಗಳು-1)

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ** : ಡಾ: ತನ್ವೀರ್ ಉಲ್ಲಾಖಾನ್, ವೈದ್ಯಾಧಿಕಾರಿ, ಪ್ರಾಥಮಿಕ ಆರೋಗ್ಯ ಕೇಂದ್ರ, ನಿಡಸಾರೆ, ಕುಣಿಗಲ್ ತಾಲ್ಲೂಕು, ತುಮಕೂರು ಇವರನ್ನು ಸೇವೆಯಿಂದ ವಿಮೋಚನೆಗೊಳಿಸುವ ಬಗ್ಗೆ

**ಓದಲಾಗಿದೆ** : ಆಯುಕ್ತರು, ಆಕುಕ ಸೇವೆಗಳು, ಇವರ ಪತ್ರ ಸಂಖ್ಯೆ: ಜೆಆರ್‌ಓ (ಎಂ) /58/2009-10 ದಿನಾಂಕ: 26/03/2010

**ಪ್ರಸ್ತಾವನೆ:**

ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು, ಇವರು ಮೇಲೆ ಓದಲಾದ ಪತ್ರದಲ್ಲಿ, ಡಾ: ತನ್ವೀರ್ ಉಲ್ಲಾಖಾನ್, ವೈದ್ಯಾಧಿಕಾರಿ, ಪ್ರಾಥಮಿಕ ಆರೋಗ್ಯ ಕೇಂದ್ರ, ನಿಡಸಾರೆ, ಕುಣಿಗಲ್ ತಾಲ್ಲೂಕು, ತುಮಕೂರು ಇವರು ದಿನಾಂಕ: 18/02/2008 ರಂದು ಸೇವೆಗೆ ಸೇರಿದ್ದು, ಅಂದಿನಿಂದಲೇ ಸರ್ಕಾರದ ಅನುಮತಿ ಇಲ್ಲದೇ ಸ್ನಾತಕೋತ್ತರ ವ್ಯಾಸಂಗಕ್ಕೆ ತೆರಳಿದ್ದು, ಸೇವೆಗೆ ಅನಧಿಕೃತ ಗೈರುಹಾಜರಾಗಿರುತ್ತಾರೆ. ಸದರಿ ವೈದ್ಯರು ಖಾಯಂಪೂರ್ವ ಸೇವಾವಧಿಯಲ್ಲಿ ಅನಧಿಕೃತ ಗೈರುಹಾಜರಾಗಿ ಕರ್ತವ್ಯಚ್ಯುತಿ ಎಸಗಿರುವುದರಿಂದ ಕರ್ನಾಟಕ ನಾಗರೀಕ ಸೇವಾ (ಪರಿವೀಕ್ಷಣೆ) ನಿಯಮಗಳು 1977 ರ ನಿಯಮ 5(1)(ಬಿ) ರನ್ವಯ ಸೇವೆಯಿಂದ ವಿಮೋಚನೆಗೊಳಿಸುವಂತೆ ಸಲ್ಲಿಸಿರುವ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 190 ಹೆಚ್‌ಎಸ್‌ಹೆಚ್ 2010, ಬೆಂಗಳೂರು ದಿನಾಂಕ: 21/05/2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ , ಡಾ: ತನ್ವೀರ್ ಉಲ್ಲಾಖಾನ್, ವೈದ್ಯಾಧಿಕಾರಿ, ಪ್ರಾಥಮಿಕ ಆರೋಗ್ಯ ಕೇಂದ್ರ, ನಿಡಸಾರೆ, ಕುಣಿಗಲ್ ತಾಲ್ಲೂಕು, ತುಮಕೂರು ಇವರು ಖಾಯಂಪೂರ್ವ ಸೇವಾವಧಿಯಲ್ಲಿ ದಿನಾಂಕ: 18/02/2008 ರಿಂದ ಕರ್ತವ್ಯಕ್ಕೆ ಅನಧಿಕೃತ ಗೈರುಹಾಜರಾಗಿರುವುದರಿಂದ ಯಾವ ಉದ್ದೇಶದಿಂದ ಇವರನ್ನು ವೈದ್ಯಾಧಿಕಾರಿ ಹುದ್ದೆಗೆ ನೇಮಕ ಮಾಡಲಾಗಿತ್ತೋ, ಆ ಉದ್ದೇಶ ಈಡೇರಿದಂತಾಗಿರುವುದಿಲ್ಲ. ಆದ್ದರಿಂದ ಇವರು ಇಲಾಖೆಯ ವೈದ್ಯಾಧಿಕಾರಿ ಹುದ್ದೆಗೆ ಸೂಕ್ತವಲ್ಲವಾದ್ದರಿಂದ ಇವರನ್ನು ಕರ್ನಾಟಕ ನಾಗರೀಕ ಸೇವಾ(ಖಾಯಂಪೂರ್ವ) ನಿಯಮಾವಳಿ 1977ರ ನಿಯಮ 6(1)(2) ರಡಿಯಲ್ಲಿ ದಿನಾಂಕ: 18/02/2008ರಿಂದ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ವಿಮೋಚನೆಗೊಳಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1340

**ಐ. ಹೇಮನಾಥ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ
(ಸೇವೆಗಳು-1)

**COMMERCE AND INDUSTRIES SECRETARIAT**

Sub: Allotment of alternative 600 acres of land to M/s. Maharashtra Seamless Ltd.

Read: 1) Govt. Order No. CI 239 SPI 2009, Dated: 30-09-2009.

2) Proceedings of the 21st State High Level Clearance Committee (SHLCC) meeting held on 29-03-2010.

**Preamble:**

The proposal of M/s. Maharashtra Seamless Ltd., to establish Spong Iron, Pig Iron, Billets in I Phase, seamless pipes in II phase, in 600 acress of land to be purchased U/s 109 of KLR Act at Kunikere village, Koppal Taluk and District, with an investment of Rs. 600 crores and employment to about 614 persons, was approved in 18th SHLCC meeting held on 24-06-2009 and G.O. read at (1) above has been issued.

In the 21st State High Level Clearance Committee (SHLCC) meeting held on 29-03-2010, the committee accepted the recommendation of Deputy Commissioner, Koppal to permit M/s. Xindia Steels Ltd., to purchase originally identified 1201 acres of land at Kunikere Village and to identify alternative 600 acres of land for allotment to M/s. Maharashtra Seamless Ltd. The Tahasildhar, Koppal was ordered to identify alternative land at Hirebagnal Village and at Halavarthi Village that could be considered for acquisition to M/s. Maharashtra Seamless Ltd.

Hence the following Order.

**Government Order No. CI 239 SPI 2009, Bangalore, Dated: 27-05-2010.**

Government is pleased to accord approval to the recommendation of Deputy Commissioner; Koppal to permit M/s. X India Steels Ltd., to purchase originally identified 1201 acres of land at Kunikere Village and to identify alternate 600 acres of land to M/s. Maharashtra Seamless Ltd. The Tahasildhar, Koppal has identified land at Hirebagnal Village measuring "197 acres 4 guntas and at Halavarthi Village 568 acres 28 guntas that could be considered for acquisition to M/s. Maharashtra Seamless Ltd. Approval is also accorded to permit M/s. Maharashtra Seamless Ltd., to purchase alternative 600 acres of land out of the above identified land U/s. 109 of KLR Act.

Other terms and conditions, infrastructure facilities, incentives and concessions remain the same as in G.O. read at (1) above.

By Order and in the name of the Governor of Karnataka

**APARNA PAVATE**

Desk Officer (Technical Cell)

Commerce & Industries Department

PR No. 1341

**ವಸತಿ ಸಚಿವಾಲಯ**

**ವಿಷಯ : ಬಿಜಾಪುರ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರ ನೇಮಕಾತಿ ಬಗ್ಗೆ.**

**ಓದಲಾಗಿದೆ** : 1. ಸರ್ಕಾರದ ಆದೇಶ ಸಂ. ವಇ/42ಹೆಚ್‌ಎಎಂ/1999, ದಿನಾಂಕ: 10–05–2000.

2. ಸರ್ಕಾರದ ಆದೇಶ ಸಂ. ವಇ/18/ಹೆಚ್‌ಎಎಸ್/2008, ದಿನಾಂಕ 16–09–2009.

**ಪ್ರಸ್ತಾವನೆ:**

ಸರ್ಕಾರವು ನಗರ ಆಶ್ರಯ ಸಮಿತಿಗಳನ್ನು ಮೇಲೆ (1)ರಲ್ಲಿ ಓದಲಾದ ಆದೇಶದನ್ವಯ ಮತ್ತು ಮೇಲೆ (2)ರಲ್ಲಿ ಓದಲಾದ ಆದೇಶವನ್ನು ಮುಂದುವರೆಸುತ್ತಾ, ಬಿಜಾಪುರ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ ಪರಿಶೀಲಿಸಿ, ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ವಇ 24 ಹೆಚ್‌ಎಎಸ್ 2010, ಬೆಂಗಳೂರು, ದಿನಾಂಕ 18–05–2010.**

ಬಿಜಾಪುರ ನಗರ ಆಶ್ರಯ ಸಮಿತಿಗೆ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಆಶ್ರಯ ಸಮಿತಿಯನ್ನು ಪುನರ್ರಚಿಸಲಾಗಿದೆ.

| | ಅಭ್ಯರ್ಥಿಯ ಹೆಸರು | ವರ್ಗ |
|---|---|---|
| 1 | ಶ್ರೀ ದಸ್ತಗೀರ್ ಮೌಲಾಸಾಬ್ (ಮೆಹಬೂಬ್), ಕನ್ನಡಿ ಬಿಜಾಪುರ ತಾಲ್ಲೂಕು ಮತ್ತು ಜಿಲ್ಲೆ | ಅಲ್ಪಸಂಖ್ಯಾತರು |

| | | |
|---|---|---|
| 2 | ಶ್ರೀ ರಾಜಶೇಖರ ಭಜಂತ್ರಿ ಬಿನ್ ಬಸಪ್ಪ ಭಜಂತ್ರಿ, ಬಿಜಾಪುರ | ಪರಿಶಿಷ್ಟ ಜಾತಿ |
| 3 | ಶ್ರೀ ಷಣ್ಮುಖ ಮಡಿವಾಳ ಬಿನ್ ಚಿದಾನಂದ ಮಡಿವಾಳ, ಬಿಜಾಪುರ | ಹಿಂದುಳಿದ ವರ್ಗ |
| 4 | ಶ್ರೀಮತಿ ಮಾಲಾ ಶಿಂಧೆ ಕೋ: ವಸಂತ ಶಿಂಧೆ, ಬಿಜಾಪುರ | ಸಾಮಾನ್ಯ (ಮಹಿಳೆ) |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1342

**ಕೆ.ಆರ್. ವಲ್ಲೂರ**

ಪೀಠಾಧಿಕಾರಿ-2 ವಸತಿ ಇಲಾಖೆ.

## ಒಳಾಡಳಿತ ಸಚಿವಾಲಯ

**ವಿಷಯ : ಶ್ರೀ ಬಿ. ಕೃಷ್ಣಮೂರ್ತಿ, ಎ.ಪಿ.ಸಿ.-139, ಡಿ.ಎ.ಆರ್. ಬಳ್ಳಾರಿ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.**

**ಓದಲಾಗಿದೆ :**
1. ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಬಳ್ಳಾರಿ ಇವರ ಆದೇಶ ಸಂಖ್ಯೆ: 41/ಪಿಆರ್ 2009 ಜಿ.ಆ. ಸಂಖ್ಯೆ: 32/2009, ದಿನಾಂಕ 30-04-2009.
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಪೂರ್ವ ವಲಯ, ದಾವಣಗೆರೆ ಇವರ ಆದೇಶ ಸಂಖ್ಯೆ: 9/ಅಪೀಲು/ಸಿಬ್ಬಂದಿ 2/2009-10 ಓ.ಬಿ. 139/2009-10, ದಿನಾಂಕ: 11-09-09.
3. ಅರ್ಜಿದಾರರ ಪರಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 19-10-09.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2) 53/2009-10 ದಿನಾಂಕ: 17-02-10.

**ಪ್ರಸ್ತಾವನೆ:**

ಶ್ರೀ ಬಿ. ಕೃಷ್ಣಮೂರ್ತಿ ಎ.ಪಿ.ಸಿ.-139, ಡಿ.ಎ.ಆರ್. ಬಳ್ಳಾರಿ ಜಿಲ್ಲೆ, ಇವರು (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯದಲ್ಲಿ ನಿರ್ಲಕ್ಷತೆ ಹಾಗೂ ಬೇಜವಾಬ್ದಾರಿತನದ ಕಾರಣದ ಮೇಲೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 7 ರಡಿ ಈ ಕೆಳಕಂಡ ದೋಷಾರೋಪಣೆಯನ್ನು ಹೊರಿಸಲಾಗಿತ್ತು.

**ದೋಷಾರೋಪಣೆ:**

"ಅನಧಿಕೃತವಾಗಿ ಕರ್ತವ್ಯಕ್ಕೆ ಗೈರುಹಾಜರಾಗಿ ಕರ್ತವ್ಯದಲ್ಲಿ ನಿರ್ಲಕ್ಷತನ ಮತ್ತು ಬೇಜವಾಬ್ದಾರಿತನ ತೋರಿಸಿದ ಬಗ್ಗೆ."

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಬಳ್ಳಾರಿ, ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ: 30-04-09ರ ಆದೇಶದಲ್ಲಿ ಅರ್ಜಿದಾರರ ವಾರ್ಷಿಕ ವೇತನ ಬಡ್ತಿಯನ್ನು ತದನಂತರದ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರದಂತೆ ಒಂದು ತಿಂಗಳ ಕಾಲ ಮುಂದೂಡುವ ದಂಡನೆಯನ್ನು ವಿಧಿಸಿ, ದಿನಾಂಕ: 11-02-09 ರಿಂದ 29-03-09ರ ವರೆಗಿನ ಒಟ್ಟು 47 ದಿನಗಳನ್ನು ಕರ್ನಾಟಕ ನಾಗರಿಕ ಸೇವಾ ನಿಯಮಾವಳಿಯ ನಿಯಮ 106(ಎ) ರಂತೆ ಸಂಬಳರಹಿತ ರಜೆಯೆಂದು ಪರಿಗಣಿಸಲಾಗಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಪೂರ್ವ ವಲಯ, ದಾವಣಗೆರೆ, ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 11-09-2009ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಪರಿಷ್ಕರಣ ಮೇಲ್ಮನವಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 187 ಪೊಸಿಅ 2009, ಬೆಂಗಳೂರು, ದಿನಾಂಕ 20–05–2010.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಬಿ. ಕೃಷ್ಣಮೂರ್ತಿ ಎ.ಪಿ.ಸಿ.–139, ಡಿ.ಎ.ಆರ್. ಬಳ್ಳಾರಿ ಜಿಲ್ಲೆ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1343

**ಟಿ.ಎನ್. ರವಿಪ್ರಕಾಶ್**
**ಸರ್ಕಾರದ ಅಧೀನ ಕಾರ್ಯದರ್ಶಿ**
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಕೆ. ಪ್ರಭಾಕರ್, ಪಿ.ಎಸ್.ಐ. ನಂಜನಗೂಡು ಗ್ರಾಮಾಂತರ ಪೊಲೀಸ್ ಠಾಣೆ, ಮೈಸೂರು, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ :**
1. ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಮೈಸೂರು ಜಿಲ್ಲೆ ಇವರ ಆದೇಶ ಸಂಖ್ಯೆ: ಶಿಕ್ಷೆ/ಜಿಎಸ್/09/2006–2007 ಓಬಿ/ಸಿವಿಲ್ 178/06–07 ದಿನಾಂಕ: 22–11–06
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು, ಇವರ ಆದೇಶ ಸಂಖ್ಯೆ: ಅಪೀಲು/30/2006–07 ದಿನಾಂಕ: 15–02–07.
3. ಅರ್ಜಿದಾರನ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 13–08–07.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)73/2007–08 ದಿನಾಂಕ: 02–11–2007.
5. ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂಖ್ಯೆ: ಪಿಎಸ್‌ಸಿ 60 ಸಿಎನ್‌ಎಸ್ 09 ದಿನಾಂಕ: 22–7–2009 ಮತ್ತು 01–12–09.

**ಪ್ರಸ್ತಾವನೆ:**

ಶ್ರೀ ಕೆ. ಪ್ರಭಾಕರ್, ಪಿ.ಎಸ್.ಐ. ಇವರು ನಂಜನಗೂಡು ಗ್ರಾಮಾಂತರ ಪೊಲೀಸ್ ಠಾಣೆ ಇಲ್ಲಿ ಕರ್ತವ್ಯ ನಿರ್ವಹಿಸುತ್ತಿರುವಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯದಲ್ಲಿ ಅಶಿಸ್ತು ಪ್ರದರ್ಶಿಸಿದ ಕಾರಣದ ಮೇಲೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿಗಳು) ನಿಯಮಾವಳಿ 1965ರ ನಿಯಮ 7 ರಡಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿತ್ತು.

**ದೋಷಾರೋಪಣೆ:**

"ನಂಜನಗೂಡು ಗ್ರಾಮಾಂತರ ಠಾಣೆಗೆ 2006ನೇ ಸಾಲಿನ ಮೇ ಮಾಹೆಯಲ್ಲಿ ಒಟ್ಟು 405 ವಾರೆಂಟ್‌ಗಳು ಕಾರ್ಯಗತಕ್ಕೆ ಬಂದಿದ್ದು, ಅವುಗಳಲ್ಲಿ 84 ವಾರೆಂಟ್‌ಗಳು ಮಾತ್ರ ಕಾರ್ಯಗತವಾಗಿದ್ದು, 72 ವಾರೆಂಟ್‌ಗಳು ಕಾರ್ಯಗತವಾಗದೇ ಇದ್ದು, 241 ವಾರೆಂಟ್‌ಗಳು ಕಾರ್ಯಗತಕ್ಕೆ ಬಾಕಿ ಇರುತ್ತದೆ. ವಾರೆಂಟ್ ಕಾರ್ಯಗತದ ಪ್ರಗತಿಯು ಶೇಕಡವಾರು ಪ್ರಮಾಣ 54% ಇರುತ್ತದೆ. ಆದ್ದರಿಂದ ಅತಿ ಕಡಿಮೆ ಮಟ್ಟದಲ್ಲಿ ವಾರೆಂಟ್ ಕಾರ್ಯಗತಗೊಳಿಸಿರುವ ಬಗ್ಗೆ ನಿಮ್ಮ ವಿವರಣೆಯನ್ನು ದಿನಾಂಕ: 11–07–2006 ರಂದು ಕೇಳಲಾಗಿದ್ದು, ನೀವು ವಿವರಣೆ ಸಲ್ಲಿಸಿರುವುದಿಲ್ಲವಾದ್ದರಿಂದ ದಿನಾಂಕ: 01–08–06 ರಂದು ಮತ್ತೊಮ್ಮೆ ಈ–ಮೇಲ್ ಸಂದೇಶ ನೀಡಿರುತ್ತಾರೆ. ಆದರೂ ಸಹ ನೀವು ಬೇಜವಾಬ್ದಾರಿ ಹಾಗೂ ನಿರ್ಲಕ್ಷತೆಯಿಂದ ವರದಿ ಸಲ್ಲಿಸದೇ ಮೇಲಾಧಿಕಾರಿಗಳ ಸೂಚನೆಯನ್ನು ಉಲ್ಲಂಘಿಸಿ ಅಶಿಸ್ತು ಪ್ರದರ್ಶಿಸಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಮೈಸೂರು ಜಿಲ್ಲೆ. ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ: 22–01–06ರ

ಆದೇಶದಲ್ಲಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ತದನಂತರದ ವಾರ್ಷಿಕ ವೇತನ ಬಡ್ತಿಗಳಿಗೆ ಧಕ್ಕೆಯಾಗದಂತೆ 6 ತಿಂಗಳ ಕಾಲ ಮುಂದೂಡುವ ದಂಡನೆಯನ್ನು ವಿಧಿಸಿದ್ದಾರೆ

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು, ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 15-02-2007ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಪ್ರಕರಣದಲ್ಲಿನ ಅರ್ಜಿದಾರರ ಪಾತ್ರವನ್ನು ಗಮನಿಸಿದಲ್ಲಿ ದಂಡನೆಯ ಪ್ರಮಾಣವು ಹೊರಿಸಲಾದ ಆರೋಪಕ್ಕೆ ಅಧಿಕವಾಗಿದೆ ಎಂದು ಪರಿಗಣಿಸಿ ಶಿಸ್ತು ಪ್ರಾಧಿಕಾರದ ದಂಡನೆಯನ್ನು ಭಾಗಶಃ ಮಾರ್ಪಡಿಸುವ ಸಲುವಾಗಿ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಕೋರಲಾಗಿತ್ತು. ಆಯೋಗವು ಸರ್ಕಾರದ ಪ್ರಸ್ತಾವನೆಗೆ ಓದಲಾದ (5)ರ ಪತ್ರಗಳಲ್ಲಿ ಸಹಮತಿಸಿರುವುದಿಲ್ಲ. ಈ ಹಿನ್ನೆಲೆಯಲ್ಲಿ ಕರ್ನಾಟಕ ಸರ್ಕಾರ (ವ್ಯವಹಾರಗಳ ನಿರ್ವಹಣೆ) ನಿಯಮಗಳು 1977, ಮೊದಲನೇ ಷೆಡ್ಯೂಲ್ ಐಟಂ 20ರನ್ವಯ ಕ್ರಮಕೈಗೊಂಡು ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 345 ಪೊಸಿಅ 2007, ಬೆಂಗಳೂರು, ದಿನಾಂಕ 20-05-2010.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಕೆ. ಪ್ರಭಾಕರ್, ಪಿ.ಎಸ್.ಐ., ನಂಜನಗೂಡು ಗ್ರಾಮಾಂತರ ಪೊಲೀಸ್ ಠಾಣೆ, ಮೈಸೂರು ಜಿಲ್ಲೆ ಇವರಿಗೆ ಶಿಸ್ತು ಪ್ರಾಧಿಕಾರವು 22-11-06ರ ಆದೇಶದಲ್ಲಿ ವಿಧಿಸಿದ ದಂಡನೆಯನ್ನು ಭಾಗಶಃ ಮಾರ್ಪಡಿಸಿ, ಇವರ ಮುಂದಿನ ವಾರ್ಷಿಕ ವೇತನ ಬಡ್ತಿಗಳನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರದಂತೆ ಒಂದು ತಿಂಗಳ ಕಾಲ ಮುಂದೂಡುವ ದಂಡನೆಯನ್ನು ವಿಧಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1344

**ಟಿ.ಎನ್. ರವಿಪ್ರಕಾಶ್**

**ಸರ್ಕಾರದ ಅಧೀನ ಕಾರ್ಯದರ್ಶಿ**

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**ಒಳಾಡಳಿತ ಸಚಿವಾಲಯ**

**ವಿಷಯ :** ಶ್ರೀ ಎ.ಕೆ. ಪಾಟೀಲ್ ಸಿಪಿಸಿ ಮತ್ತು ಶ್ರೀ ಡಿ.ವಿ. ಜಡಗಿ ಸಿ.ಎಚ್.ಸಿ., ನಂದಗಡ ಪೊಲೀಸ್ ಠಾಣೆ, ಬೆಳಗಾವಿ ಜಿಲ್ಲೆ ಇವರುಗಳು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ :**

1. ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಬೆಳಗಾವಿ ಇವರ ಆದೇಶ ಸಂಖ್ಯೆ: ಸಿಬ್ಬಂದಿ 2/ಇವಿ/12/2006 ಆ.ಪು. ಸಂಖ್ಯೆ: 619/2007 ದಿನಾಂಕ: 20-06-07.
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಉತ್ತರ ವಲಯ, ಬೆಳಗಾವಿ ಇವರ ಆದೇಶ ಸಂಖ್ಯೆ: ಅಪೀಲು/161/ಉವ/2006 ದಿನಾಂಕ: 03-10-07.
3. ಅರ್ಜಿದಾರರುಗಳ ಪರಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 10-10-08.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)77-78/2008-09 ದಿನಾಂಕ: 25-09-2009

**ಪ್ರಸ್ತಾವನೆ:**

ಶ್ರೀಯುತರಾದ ಎ.ಕೆ. ಪಾಟೀಲ್ ಸಿಪಿಸಿ ಮತ್ತು ಶ್ರೀ ಡಿ.ವಿ. ಜಡಗಿ ಸಿ.ಎಚ್.ಸಿ. ನಂದಗಡ ಪೊಲೀಸ್ ಠಾಣೆ, ಬೆಳಗಾವಿ ಜಿಲ್ಲೆ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಇವರುಗಳು ಕರ್ತವ್ಯದಲ್ಲಿ ಘೋರ ದುರ್ನಡತೆ ಪ್ರದರ್ಶಿಸಿದ ಕಾರಣದ ಮೇಲೆ ಇನ್ನೋರ್ವ ಸಿಬ್ಬಂದಿಯೊಂದಿಗೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6 ರೊಂದಿಗೆ 8ರಡಿ ಜಂಟಿ ಇಲಾಖಾ ವಿಚಾರಣೆಗೆ ಆದೇಶಿಸಿ ಈ ಕೆಳಕಂಡ ದೋಷಾರೋಪಣೆಯನ್ನು ಹೊರಿಸಲಾಗಿತ್ತು.

**ದೋಷಾರೋಪಣೆ:**

1. "ಆಪಾದಿತ ಪೊಲೀಸ್ ಅಧಿಕಾರಿ ಸಿಪಿಸಿ-1976 ಎಲ್. ವಾಯ, ಗಾಡಿವಡ್ಡರ, ನಂದಗಡ ಪೊಲೀಸ್ ಠಾಣೆರವರಾದ ಆಪಾದನೆ:1: ನೀವು ಹಾಗೂ ನಿಮ್ಮ ಇಬ್ಬರು ಮಕ್ಕಳೊಂದಿಗೆ ದಿನಾಂಕ: 31-05-2006 ರಂದು 2330 ಗಂಟೆಯ ಸುಮಾರಿಗೆ

ಸಿಪಿಸಿ 1517 ಎಸ್.ಎ. ತೊಲಗಿ ನಂದಗಡ ಪೊಲೀಸ್ ಠಾಣೆ, ವಿನಾಕಾರಣ ಇವರ ಮನೆಯ ಬಾಗಿಲು ಒದ್ದು ಒಳಗೆ ಹೋಗಿ ಸಿಪಿಸಿ–1517 ಎಸ್.ಎ. ತೊಲಗಿ ಇವರ ಪತ್ನಿ ಹಾಗೂ ಮಕ್ಕಳಿಗೆ ಅವಾಚ್ಯ ಶಬ್ದಗಳಲ್ಲಿ ಬೈದು ಹೊಡಿಬಡಿ ಮಾಡಿ ನಿಮ್ಮ ಕರ್ತವ್ಯದಲ್ಲಿ ಅತೀವ ಹಾಗೂ ಘೋರ ದುರ್ನಡತೆ ಪ್ರದರ್ಶಿಸಿರುವಿರಿ.

2. ಆಪಾದಿತ ಪೊಲೀಸ್ ಅಧಿಕಾರಿ:1 ಸಿಪಿಸಿ 1976 ಎಲ್. ವಾಯ, ಗಾಡಿವಡ್ಡರ, ನಂದಗಡ ಪೊಲೀಸ್ ಠಾಣೆರವರಾದ ನೀವು ಹಾಗೂ ಆಪೊಅ:2–ಸಿಪಿಸಿ–2176 ಎ.ಕೆ. ಪಾಟೀಲ ಹಾಗೂ ಆ.ಪೊ.ಅ.–3. ಸಿ.ಎಚ್.ಸಿ. 1946 ಡಿ.ವ್ಹಿ. ಜಡಗಿ ಇಬ್ಬರೂ ನಂದಗಡ ಪೊಲೀಸ್ ಠಾಣೆರವರು ಕೂಡಿ ಮೇಲಾಧಿಕಾರಿಗಳ ಅವಹೇಳನ ಮಾಡುವುದು, ಪೊಲೀಸ್ ಠಾಣೆಯ ಸಹದ್ಯೋಗಿ ಸಿಬ್ಬಂದಿಯವರ ಕೂಡಾ ಜಗಳವಾಡುವುದು ಬೈಯುವುದು ಮಾಡುತ್ತಾ ಪೊಲೀಸ್ ಇಲಾಖೆಯ ಹೆಸರು ಕೆಡಿಸುವಂತಹ ಅಪಕೃತ್ಯಗಳನ್ನು ಎಸಗಿ ನಿಮ್ಮ ಕರ್ತವ್ಯದಲ್ಲಿ ಘೋರ ದುರ್ನಡತೆ ಪ್ರದರ್ಶಿಸಿರುವಿರಿ.”

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಬೆಳಗಾವಿ ಜಿಲ್ಲೆ, ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ: 20–06–07ರ ಆದೇಶದಲ್ಲಿ ಇವರ ವೇತನವನ್ನು ಇವರ ಹುದ್ದೆಯ ಕನಿಷ್ಠ ಮೂಲ ವೇತನಕ್ಕೆ ಇಳಿಸಲಾಗಿದೆ. ಸದರಿಯವರು ಹೊಸದಾಗಿ ವೇತನ ಬಡ್ತಿಗಳನ್ನು ಗಳಿಸುವ ದಂಡನೆಯನ್ನು ವಿಧಿಸಿದ್ದಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಉತ್ತರ ವಲಯ, ಬೆಳಗಾವಿ ಇವರು ಶಿಸ್ತು ಪ್ರಾಧಿಕಾರಿಗಳ ದಂಡನಾದೇಶವು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳು ನಿಯಮ 59(1)(ಬಿ)ಗೆ ವ್ಯತಿರಿಕ್ತವಾಗಿರುವುದರಿಂದ ಶಿಸ್ತು ಪ್ರಾಧಿಕಾರದ ದಂಡನಾದೇಶವನ್ನು ಮಾರ್ಪಡಿಸಿ ಅರ್ಜಿದಾರರುಗಳ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ತದನಂತರದ ವೇತನ ಬಡ್ತಿಗಳಿಗೆ ದಕ್ಕೆಯಾಗುವಂತೆ ಮೂರು ವರ್ಷಗಳ ಕಾಲ ಮುಂದೂಡುವ ದಂಡನೆಯನ್ನು ವಿಧಿಸಿ ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 03–10–2007ರಲ್ಲಿ ಆದೇಶಿಸಿದ್ದಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣಾ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಪರಿಷ್ಕರಣ ಮೇಲ್ಮನವಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ ಹಾಗೂ ದುರ್ನಡತೆ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾದಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 335 ಪೊಸಿಅ 2008, ಬೆಂಗಳೂರು, ದಿನಾಂಕ 20–05–2010.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎ.ಕೆ. ಪಾಟೀಲ್ ಸಿಪಿಸಿ ಮತ್ತು ಶ್ರೀ ಡಿ.ವಿ. ಜಡಗಿ ಸಿ.ಎಚ್.ಸಿ., ನಂದಗಡ ಪೊಲೀಸ್ ಠಾಣೆ, ಬೆಳಗಾವಿ ಜಿಲ್ಲೆ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1345

**ಟಿ.ಎನ್. ರವಿಪ್ರಕಾಶ್**

**ಸರ್ಕಾರದ ಅಧೀನ ಕಾರ್ಯದರ್ಶಿ**

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

## ಕಂದಾಯ ಸಚಿವಾಲಯ

**ವಿಷಯ :** ಶ್ರೀ ಯು.ಜಿ. ನಾಯಕ್, ಹಿಂದಿನ ಉಪ ತಹಶೀಲ್ದಾರ್, ನಾಡಕಛೇರಿ, ಕೋಣಂದೂರು, ತೀರ್ಥಹಳ್ಳಿ ತಾಲ್ಲೂಕು, (ಪ್ರಸ್ತುತ ನಿವೃತ್ತ ತಹಶೀಲ್ದಾರ್) ಇವರ ವಿರುದ್ಧ ಇಲಾಖಾ ವಿಚಾರಣೆ – ಅಂತಿಮ ಆದೇಶ ಕುರಿತು.

**ಓದಲಾಗಿದೆ :**

1. ಜಿಲ್ಲಾಧಿಕಾರಿಗಳು, ಶಿವಮೊಗ್ಗ ಜಿಲ್ಲೆ ಇವರ ಪ್ರಸ್ತಾವನೆ ಪತ್ರ ಸಂಖ್ಯೆ : ಸಿಬ್ಬಂದಿ (3) : ವಿವ:24/2005–06, ದಿನಾಂಕ 29–10–2005, 12–11–2007.
2. ಸರ್ಕಾರದ ಕಾರಣ ಕೇಳುವ ನೋಟೀಸು : ದಿನಾಂಕ 29.05.2006.
3. ಶ್ರೀ ಯು.ಜಿ. ನಾಯಕ್ ಇವರ ಲಿಖಿತ ಸಮಜಾಯಿಷಿ ದಿ : 14–08–2006.
4. ಸರ್ಕಾರದ ಆದೇಶ ಸಂಖ್ಯೆ : ಆರ್‌ಡಿ 61 ಎಡಿಇ 2005, ದಿನಾಂಕ 22–08–2008.
5. ಸರ್ಕಾರದ ಆದೇಶ ಸಂ : ಆರ್‌ಡಿ 61 ಎಡಿಇ 2005, ದಿನಾಂಕ 11–12–2008.
6. ವಿಚಾರಣಾಧಿಕಾರಿಗಳ ವರದಿ ದಿನಾಂಕ : 26–06–2009.
7. ಸರ್ಕಾರದ ಎರಡನೇ ಕಾರಣ ಕೇಳುವ ನೋಟೀಸು ದಿನಾಂಕ 08–09–2009.
8. ಶ್ರೀ ಯು.ಜಿ. ನಾಯಕ್ ಇವರ ಲಿಖಿತ ಸಮಜಾಯಿಷಿ ದಿ : 23–09–2009.

**ಪ್ರಸ್ತಾವನೆ :**

ಶ್ರೀ ಯು.ಜಿ. ನಾಯಕ್, ಇವರು ಹಿಂದೆ ಉಪ ತಹಶೀಲ್ದಾರ್, ನಾಡಕಛೇರಿ, ಕೋಣಂದೂರು, (ಪ್ರಸ್ತುತ ನಿವೃತ್ತ ತಹಶೀಲ್ದಾರ್) ಇಲ್ಲಿ ಕಾರ್ಯನಿರ್ವಹಿಸುತ್ತಿದ್ದ ಅವಧಿಯಲ್ಲಿ ತೀರ್ಥಹಳ್ಳಿ ತಾಲ್ಲೂಕಿನ ನೋಣಬೂರು ಗ್ರಾಮದ ಸ.ನಂ. 162ರ ಜಮೀನಿನ ಖಾತೆದಾರರ ಹೆಸರು ಮತ್ತು ಅಧಿಬೋಗದಾರಿಕೆ ಹಕ್ಕು ಪತ್ರ ಇತ್ಯಾದಿ ದಾಖಲೆಗಳನ್ನು ಪರಿಶೀಲಿಸದೇ, ಗ್ರಾಮ ಲೆಕ್ಕಾಧಿಕಾರಿಗಳು ನೀಡಿದ ವರದಿಯನ್ನು ಮಾತ್ರ ಪರಿಶೀಲಿಸಿ, ನೋಣಬೂರು ಸರ್ವೆ ನಂ. 162 ರಲ್ಲಿ 1–06 ಎಕರೆ ತರಿ ಜಮೀನನ್ನು ಅಧಿಬೋಗದಾರಿಕೆ ಹಕ್ಕು ಮಂಜೂರಾತಿ ಪೂರ್ವದಲ್ಲಿಯೇ ಶ್ರೀ ಹರನಾಥ್‌ಭಟ್ ಬಿನ್ ಅನಂತ ಪದ್ಮನಾಭ ಭಟ್ ಇವರ ಹೆಸರಿಗೆ ಖಾತೆ, ಪಹಣಿ ಬದಲಾವಣೆ ಮಾಡಿ ಜುಬಾನಿ ಹಿಸ್ಸೆ ಪತ್ರದ ಮೇಲೆ ಎಂ.ಆರ್.9 :94–95, ದಿನಾಂಕ 10.4.95 ರಂತೆ ಅಕ್ರಮವಾಗಿ ಮ್ಯೂಟೇಷನ್ ಅನ್ನು ದೃಢೀಕರಿಸಿ, ಕಾನೂನನ್ನು ಉಲ್ಲಂಘನೆ ಮಾಡಿ, ಕರ್ತವ್ಯ ನಿರ್ಲಕ್ಷ ಮತ್ತು ಬೇಜವಾಬ್ದಾರಿಯಿಂದ ವರ್ತಿಸಿ, ಕರ್ನಾಟಕ ನಾಗರೀಕ ಸೇವಾ (ನಡತೆ) 1966ರ ನಿಯಮಾವಳಿಗಳನ್ನು ಉಲ್ಲಂಘಿಸಿರುವ ಆರೋಪದ ಮೇರೆಗೆ ಶಿಸ್ತು ಕ್ರಮ ಜರುಗಿಸುವಂತೆ ಮೇಲೆ ಓದಲಾದ ಕ್ರ.ಸಂ. (1), ದಿನಾಂಕ : 29–10–2005 ರಲ್ಲಿ ಜಿಲ್ಲಾಧಿಕಾರಿಗಳು, ಶಿವಮೊಗ್ಗ ಇವರು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಜಿಲ್ಲಾಧಿಕಾರಿಗಳ ಪ್ರಸ್ತಾವನೆ ಅನ್ವಯ, ಸರ್ಕಾರವು ಶ್ರೀ ಯು.ಜಿ. ನಾಯಕ್, ತಹಶೀಲ್ದಾರ್, ಇವರಿಗೆ ದೋಷಾರೋಪಣಾ ಪಟ್ಟಿ (ಅನುಬಂಧ 1 ರಿಂದ 4 ರವರೆಗೆ) ಸಿಸಿಎ ನಿಯಮಾವಳಿ ಅನ್ವಯ, ಮೇಲೆ ಓದಲಾದ ಕ್ರ.ಸಂ. (2)ರ ದಿನಾಂಕ : 29–05–2006 ಕಾರಣ ಕೇಳುವ ನೋಟೀಸ್ ಜಾರಿ ಮಾಡಲಾಗಿತ್ತು. ಸದರಿ ನೋಟೀಸಿಗೆ ಶ್ರೀ ಯು.ಜಿ. ನಾಯಕ್ ಮೇಲೆ ಓದಲಾದ ಕ್ರ.ಸಂ. ದಿನಾಂಕ 14–08–2006 ರಲ್ಲಿ ಲಿಖಿತ ಸಮಜಾಯಿಷಿಯನ್ನು ಸಲ್ಲಿಸಿ, ತಮ್ಮ ವಿರುದ್ಧದ ಆರೋಪಗಳನ್ನು ಅಲ್ಲಗೆಳೆದು ನಿಯಮಾನುಸಾರ ಮ್ಯೂಟೇಷನ್ ಮಂಜೂರು ಮಾಡಲಾಗಿದೆ ಎಂದು ತಿಳಿಸಿ, ಆರೋಪದಿಂದ ಮುಕ್ತಗೊಳಿಸುವಂತೆ ಕೋರಿರುತ್ತಾರೆ.

ಸದರಿಯವರ ಲಿಖಿತ ಸಮಜಾಯಿಷಿಯನ್ನು ಸರ್ಕಾರವು ಪರಿಶೀಲಿಸಿ, ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 214 ರಡಿಯಲ್ಲಿ ಇಲಾಖಾ ವಿಚಾರಣೆಯನ್ನು ನಡೆಸಬೇಕೆಂದು ಹಾಗೂ ಈ ವಿಚಾರಣೆಯಲ್ಲಿ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 11 ರಡಿಯಲ್ಲಿ ಈ ಪ್ರಕರಣದ ಸತ್ಯಾಸತ್ಯತೆಯನ್ನು ಕಂಡುಕೊಳ್ಳುವ ದೃಷ್ಟಿಯಿಂದ **ಶ್ರೀ ಎಸ್.ಜಿ. ಪಲ್ಲೇದ, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು ಹಾಗೂ ಅಧ್ಯಕ್ಷರು, ಜಿಲ್ಲಾ ಗ್ರಾಹಕರ ವೇದಿಕೆ, ಗದಗ್, ಗದಗ್ ಜಿಲ್ಲೆ** ಇವರನ್ನು ವಿಚಾರಣಾಧಿಕಾರಿಯನ್ನಾಗಿ ಮತ್ತು **ಕೇಂದ್ರ ಸ್ಥಾನಿಕ ಸಹಾಯಕರು, ಜಿಲ್ಲಾಧಿಕಾರಿಗಳ ಕಛೇರಿ, ಶಿವಮೊಗ್ಗ ಇವರನ್ನು ಮಂಡನಾಧಿಕಾರಿಯನ್ನಾಗಿ** ಉಲ್ಲೇಖಿತ (4)ರ ದಿನಾಂಕ : 22.2.2008 ರ ಆದೇಶದಲ್ಲಿ ನೇಮಿಸಲಾಗಿತ್ತು.

ಶ್ರೀ ಎಸ್.ಜಿ. ಪಲ್ಲೇದ, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು ಹಾಗೂ ವಿಚಾರಣಾಧಿಕಾರಿಗಳು ಸರ್ಕಾರಕ್ಕೆ ದಿನಾಂಕ 29–08–2008 ರಲ್ಲಿ ಮನವಿ ಸಲ್ಲಿಸಿ, ತಾವು ಗದಗ್ ಜಿಲ್ಲಾ ಗ್ರಾಹಕರ ವೇದಿಕೆಯಲ್ಲಿ ಪೂರ್ಣಕಾಲಿಕ ಅಧ್ಯಕ್ಷರಾಗಿ ಕಾರ್ಯನಿರ್ವಹಿಸುತ್ತಿದ್ದು, ಜೊತೆಗೆ ಸಹಾಯಕ ರಿಜಿಸ್ಟ್ರಾರ್ ಮತ್ತು ಸಹಾಯಕ ಆಡಳಿತಾಧಿಕಾರಿ ಅಂತ ಪ್ರಭಾರನಾಗಿ ಕೆಲಸ ನಿರ್ವಹಿಸುತ್ತಿರುವುದಾಗಿ, ಈ ಕಾರಣ ಈ ಪ್ರಕರಣದಲ್ಲಿ ಇಲಾಖಾ ವಿಚಾರಣೆ ನಡೆಸುವುದು ಸಾಧ್ಯವಾಗುವುದಿಲ್ಲವೆಂದು

ತಿಳಿಸುತ್ತಾ, ಈ ಬಗ್ಗೆ ಬೇರೆ ವ್ಯವಸ್ಥೆ ಮಾಡಿಕೊಳ್ಳಲು ಕೋರಿದ್ದರು. ಸದರಿಯವರ ಮನವಿಯನ್ನು ಸರ್ಕಾರವು ಪರಿಶೀಲಿಸಿ, ಈ ಪ್ರಕರಣಕ್ಕೆ ಬೇರೆ ನಿವೃತ್ತ ಜಿಲ್ಲಾ ಸತ್ರ ನ್ಯಾಯಾಧೀಶರನ್ನು ನೇಮಿಸಲು ತೀರ್ಮಾನಿಸಿ, ಮೇಲೆ ಓದಲಾದ ಕ್ರ.ಸಂ. (5) ರಲ್ಲಿ ಇಲಾಖಾ ವಿಚಾರಣೆ ನಡೆಸಲು ನಿಯೋಜಿಸಲಾಗಿದ್ದ ಶ್ರೀ ಎಸ್.ಜಿ. ಪಲ್ಲೇದ, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು ಹಾಗೂ ಅಧ್ಯಕ್ಷರು, ಜಿಲ್ಲಾ ಗ್ರಾಹಕರ ವೇದಿಕೆ, ಗದಗ್ ಜಿಲ್ಲೆ ಇವರ ಬದಲಿಗೆ ಶ್ರೀ ಎನ್. ಸುಬ್ಬಾರಾವ್, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು #1033, 9ನೇ 'ಬಿ' ಮೇನ್, ಜ್ಯುಡಿಷಿಯಲ್ ಲೇಔಟ್, ಜಿ.ಕೆ.ವಿ.ಕೆ. ಪೋಸ್ಟ್, ಬೆಂಗಳೂರು–560065 ಇವರನ್ನು ವಿಚಾರಣಾಧಿಕಾರಿಯಾಗಿ ನೇಮಿಸಲಾಗಿತ್ತು.

ಮೇಲೆ ಓದಲಾದ ಕ್ರ.ಸಂ. (6) ರಲ್ಲಿ ಅಧಿಬೋಗದಾರಿಕೆ ಹಕ್ಕು ಮಂಜೂರಾತಿ ಪೂರ್ವದಲ್ಲಿಯೇ ಬಾಕಿ ಪಹಣಿ ಬದಲಾವಣೆ ಮಾಡಿ ಜುಬಾನಿ ಹಿಸ್ಸೆ ದೃಢೀಕರಿಸಿ, ಕಾನೂನು ಉಲ್ಲಂಘನೆ ಮಾಡಿ ಕರ್ತವ್ಯ ನಿರ್ಲಕ್ಷ ಮತ್ತು ಬೇಜವಾಬ್ದಾರಿಯಿಂದ ವರ್ತಿಸಿ ಕರ್ನಾಟಕ ನಾಗರೀಕ ಸೇವಾ (ನಡತೆ) 1966ರ ನಿಯಮಗಳನ್ನು ಉಲ್ಲಂಘಿಸಿರುತ್ತಾರೆ ಎಂದು ಹೊರಿಸಲಾದ ಆರೋಪಕ್ಕೆ ವಿಚಾರಣಾಧಿಕಾರಿಗಳು ಈ ಕೆಳಗಿನಂತೆ ವರದಿ ಸಲ್ಲಿಸಿರುತ್ತಾರೆ.

ಮುಖ್ಯವಾಗಿ ಇನಾಂ ಜಮೀನುಗಳಿಗೆ ಇನಾಂ ರದ್ದತಿ ಕಾಯಿದೆಯ ಅನ್ವಯ ಕ್ರಮ ತೆಗೆದುಕೊಳ್ಳಬೇಕಿದ್ದು, ಅದಕ್ಕೆ ಜಿಲ್ಲಾಧಿಕಾರಿಗಳು ಸಕ್ಷಮ ಪ್ರಾಧಿಕಾರವಾಗಿರುತ್ತದೆ. ಆಪಾದಿತರು ಹಾಜರುಪಡಿಸಿರುವ ಮಾನ್ಯ ಉಚ್ಚ ನ್ಯಾಯಾಲಯದ ತೀರ್ಪು ಭೂ ಸುಧಾರಣೆ ಕಾನೂನಿನನ್ವಯ ಟ್ರಿಬ್ಯೂನಲ್‌ಗಳು ನೀಡುವ ಆದೇಶಗಳ ಬಗ್ಗೆ ಇದೆ. ಆದರೆ ಇಲ್ಲಿ, ಟ್ರಿಬ್ಯೂನಲ್‌ನಿಂದಾಗಲೀ ಸಕ್ಷಮ ಪ್ರಾಧಿಕಾರದಿಂದಾಗಲಿ ಅನ್ವಯವಾಗುವ ಕಾನೂನಿನಂತೆ ಆದೇಶ/ತೀರ್ಪು ಆಗಿಲ್ಲ. ಆದರೆ, ಆ ಪ್ರಕಾರ ಆಪಾದಿತರು ಕ್ರಮ ತೆಗೆದುಕೊಳ್ಳಲು ಆದೇಶ ಮಾಡಿದ್ದಾರೆ. ಈ ಆದೇಶವೂ ಕಾನೂನಿಗನುಗುಣವಾಗಿ ಆಗಿಲ್ಲ. ಆಪಾದಿತರ ವಾದ, ತನ್ನ ಆದೇಶದ ಮೇಲೆ ಅಪೀಲು ಯಾರು ಮಾಡಿಲ್ಲ ಯಾರಿಗೂ ಅನ್ಯಾಯವಾಗಿಲ್ಲ ಎನ್ನುವುದಾಗಿದೆ. ನಿಯಮಗಳ ಪ್ರಕಾರ ಜಮೀನು ಸರ್ಕಾರಕ್ಕೆ ಹೋಗುತ್ತದೆ. ಹಾಗಿರುವಲ್ಲಿ ಬೇರೆಯವರ ಹೆಸರಿನಲ್ಲಿ ಖಾತೆ ಆಗಿದ್ದುದು ಸಮರ್ಪಕವಲ್ಲ. ಮೇಲೆ ಹೇಳಿದಂತೆ, ದಾಖಲೆಗಳನ್ನು ಪರಿಶೀಲಿಸದೆ ತಮ್ಮ ಸ್ವಂತ ವಿವೇಚನೆಯನ್ನು ಉಪಯೋಗಿಸದೆ ಗ್ರಾಮಲೆಕ್ಕಿಗರ ವರದಿಯ ಆಧಾರದ ಮೇಲೆ ಆಪಾದಿತರು ಆದೇಶ ಮಾಡಿದ್ದು, ಅವರ ಮೇಲಿನ ಆಪಾದನೆಗಳು ರುಜುವಾತಾಗಿದೆಯೆಂದು ವರದಿ ನೀಡಿರುತ್ತಾರೆ.

ಮೇಲೆ ಓದಲಾದ ಕ್ರ.ಸಂ. (7) ರಲ್ಲಿ ವಿಚಾರಣಾ ವರದಿಯ ಬಗ್ಗೆ ಸಮಜಾಯಿಷಿ ಏನಾದರೂ ಇದ್ದರೆ, ಲಿಖಿತ ಹೇಳಿಕೆ ಸಲ್ಲಿಸುವಂತೆ, ಎರಡನೇ ಕಾರಣ ಕೇಳುವ ನೋಟೀಸ್ ನೀಡಲಾಗಿತ್ತು.

ಶ್ರೀ ಯು.ಜಿ. ನಾಯಕ್, ನಿವೃತ್ತ ತಹಶೀಲ್ದಾರ್ ಇವರು ಹಕ್ಕು ಬದಲಾವಣೆ ಆದೇಶವನ್ನು ಇತರೇ ಹಕ್ಕು ಬದಲಾವಣೆ ಪ್ರಕರಣದಲ್ಲಿ ಮಾಡಿರುವಂತೆ, ಮಾಡಲಾಗಿದ್ದು, ಇದರಲ್ಲಿ ಯಾವುದೇ ವೈಯಕ್ತಿಕ ಆಸಕ್ತಿ ತೋರಿಸಿದ್ದಾಗಲೀ ಅಥವಾ ಯಾವುದೇ ವ್ಯಕ್ತಿಗೆ ಅನುಕೂಲವನ್ನು ಮಾಡುವ ಉದ್ದೇಶವಾಗಲೀ ಇರಲಿಲ್ಲ. ಆದುದರಿಂದ, ದೋಷಾರೋಪಣೆಯಿಂದ ಮುಕ್ತ ಮಾಡುವಂತೆ ಮೇಲೆ ಓದಲಾದ ಕ್ರ.ಸಂ. (8) ರಲ್ಲಿ ತಮ್ಮ ಲಿಖಿತ ಉತ್ತರ ಸಲ್ಲಿಸಿ, ಕೋರಿರುತ್ತಾರೆ.

ಅದರಂತೆ, ಸರ್ಕಾರವು ವಿಚಾರಣಾ ವರದಿ ಮತ್ತು ಆಪಾದಿತರ ಹೇಳಿಕೆ ಪರಿಶೀಲಿಸಿದಾಗ, ತೀರ್ಥಹಳ್ಳಿ ತಾಲ್ಲೂಕು ನೊಣಬೂರು ಗ್ರಾಮದ ಸರ್ವೆ ನಂ 162ರ ಒಂದು ಎಕರೆ, ಆರು ಗುಂಟೆ ಪ್ರದೇಶವು ದೇವಾಲಯ ಇನಾಂ ಜಮೀನಾಗಿದ್ದು, ಶ್ರೀ ವೆಂಕಟರಮಣ ಸ್ವಾಮಿ ದೇವಸ್ಥಾನದ ಹೆಸರಿನಲ್ಲಿ ಖಾತೆ ಇದ್ದು, ಇದನ್ನು ಸಕ್ಷಮ ಪ್ರಾಧಿಕಾರಿಗಳಾದ ಜಿಲ್ಲಾಧಿಕಾರಿಗಳು ಇನಾಂ ಅಬಾಲಿಶನ್ ಕಾನೂನಿನಂತೆ, ಮರು ಮಂಜೂರು ಮಾಡಬೇಕಿರುತ್ತದೆ. ಆದರೆ, ಆಪಾದಿತರಾದ ಶ್ರೀ ಯು.ಜಿ. ನಾಯಕ್, ಹಿಂದಿನ ತಹಶೀಲ್ದಾರ್, (ಪ್ರಸ್ತುತ ನಿವೃತ್ತ) ಇವರು ಮೂಲ ದಾಖಲೆ ಹಾಗೂ ಪಹಣಿಗಳನ್ನು ಪರಿಶೀಲಿಸದೆ ಗ್ರಾಮಲೆಕ್ಕಿಗರ ವರದಿಯನ್ನು ನಂಬಿಕೊಂಡು, ಹಕ್ಕು ಬದಲಾವಣೆ ಮಾಡಲು ಆದೇಶ ಮಾಡಿದ್ದಾರೆ. ನಂತರ ಈ ಘಟನೆ ಬೆಳಕಿಗೆ ಬಂದು ಜಿಲ್ಲಾಧಿಕಾರಿಗಳು, ತಹಶೀಲ್ದಾರರ ಆದೇಶವನ್ನು ರದ್ದುಪಡಿಸಿದ್ದು, ಭೂಮಿಯು ಸರ್ಕಾರದ ವಶದಲ್ಲಿದೆ ಎಂದು ತಿಳಿಸಲಾಗಿದೆ. ಆದರೂ ತಹಶೀಲ್ದಾರರು ತನಗಿರದ ಹಕ್ಕನ್ನು ಉಪಯೋಗಿಸಿ, ಅಕ್ರಮ ಖಾತೆ ಮಾಡಲು ಕಾರಣರಾಗಿ ಕರ್ತವ್ಯ ಲೋಪವೆಸಗಿರುವುದು ಕಂಡುಬಂದಿದ್ದರಿಂದ ಅವರ ನಿವೃತ್ತಿ ಸೌಲಭ್ಯಗಳಾದ ಡಿ.ಸಿ.ಆರ್.ಜಿ. ಯಿಂದ ರೂ.5.000/– ಗಳನ್ನು ವಸೂಲು ಮಾಡುವ ದಂಡನೆ ವಿಧಿಸಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ : ಆರ್‌ಡಿ 61 ಎಡಿಇ 2005, ಬೆಂಗಳೂರು, ದಿನಾಂಕ : 17–05–2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಶ್ರೀ ಯು.ಜಿ. ನಾಯಕ್, ಹಿಂದಿನ ಉಪ ತಹಶೀಲ್ದಾರ್, ನಾಡಕಛೇರಿ, ಕೋಣಂದೂರು, ತೀರ್ಥಹಳ್ಳಿ ತಾಲ್ಲೂಕು (ಪ್ರಸ್ತುತ ನಿವೃತ್ತರು) ಇವರ ವಿರುದ್ಧ ಇಲಾಖಾ ವಿಚಾರಣೆಯಲ್ಲಿ ಆಪಾದನೆಗಳು ಸಾಬೀತಾಗಿದ್ದರಿಂದ, ಸದರಿಯವರ ನಿವೃತ್ತಿ ಸೌಲಭ್ಯಗಳಾದ ಡಿ.ಸಿ.ಆರ್.ಜಿ. ಯಿಂದ ರೂ.5,000/– (ಐದು ಸಾವಿರ ರೂಪಾಯಿಗಳು ಮಾತ್ರ) ಗಳನ್ನು ವಸೂಲು ಮಾಡುವ ದಂಡನೆಯನ್ನು ವಿಧಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಎಸ್.ಬಿ. ಸಸಾಲಟ್ಟಿ),**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಸೇವೆಗಳು–3)

ಪಿ.ಆರ್. 1391

**ಕಂದಾಯ ಸಚಿವಾಲಯ**

**ವಿಷಯ :** ಪಂಚಶೀಲ ವೆಲ್‌ಫೇರ್ ಅಸೋಸಿಯೇಷನ್ ಹಾಗೂ ಬೆಂಗಳೂರು ಇನ್‌ಸ್ಟಿಟ್ಯೂಟ್ ಫಾರ್ ಹೈಯರ್ ಎಜುಕೇಷನ್ ಅಂಡ್ ರೀಸರ್ಚ್ ಟ್ರಸ್ಟ್ ಇವರಿಗೆ ಸರ್ಕಾರಿ ಜಮೀನು ಮಂಜೂರಾತಿ ಬಗ್ಗೆ.

**ಓದಲಾಗಿದೆ :**

1. ಸರ್ಕಾರದ ಪತ್ರ ಸಂಖ್ಯೆ : ಆರ್‌ಡಿ 612 ಎಲ್‌ಜಿಬಿ 2008, ದಿ : 14-10-2008.
2. ಶ್ರೀ ಡಿ.ಎಸ್. ವೀರಯ್ಯ, ಮಾನ್ಯ ವಿಧಾನ ಪರಿಷತ್ ಸದಸ್ಯರು ಇವರ ಮನವಿಯ ದಿನಾಂಕ 20.05.2009.
3. ವಿಶೇಷ ಜಿಲ್ಲಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ ಇವರ ಪತ್ರ ಸಂಖ್ಯೆ ಎಲ್‌ಎನ್‌ಡಿ (ಎಸ್) ಸಿಆರ್ 1043/06-07, ದಿ : 18-08-2009.
4. ವಿಶೇಷ ಜಿಲ್ಲಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ ಇವರ ಪತ್ರ ಸಂಖ್ಯೆ ಎಲ್‌ಎನ್‌ಡಿ (ಎಸ್) ಸಿಆರ್ 50/07-08, ದಿ : 31-08-2009.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರಲ್ಲಿನ ಸರ್ಕಾರದ ಪತ್ರದ ದಿ : 14-10-2008 ರಲ್ಲಿ ಬೆಂಗಳೂರು ದಕ್ಷಿಣ ತಾಲ್ಲೂಕು, ಕೆಂಗೇರಿ ಹೋಬಳಿ, ಕುಂಬಳಗೋಡು ಗ್ರಾಮದ ಸ.ನಂ. 182 ರಲ್ಲಿ ಈ ಹಿಂದೆ SEBI ಮತ್ತು ವಿಶ್ವೇಶ್ವರಯ್ಯ ತಾಂತ್ರಿಕ ಮಹಾವಿದ್ಯಾಲಯ ಇವರಿಗೆ ಜಮೀನು ಮಂಜೂರು ಮಾಡಿರುವುದನ್ನು ರದ್ದುಪಡಿಸಿ ಕೆ.ಪಿ.ಟಿ.ಸಿ.ಎಲ್. ಮತ್ತು ಪಂಚಶೀಲ ವೆಲ್‌ಫೇರ್ ಅಸೋಸಿಯೇಷನ್ ಇವರಿಗೆ ಕ್ರಮವಾಗಿ 12 ಎಕರೆ ಮತ್ತು 5 ಎಕರೆ ಜಮೀನನ್ನು ಮಂಜೂರು ಮಾಡಿರುವುದನ್ನು ಸ್ಥಿರೀಕರಿಸಲು ಸರ್ಕಾರದ ಅನುಮೋದನೆ ನೀಡಲಾಗಿರುತ್ತದೆ.

ಶ್ರೀ ಡಿ.ಎಸ್. ವೀರಯ್ಯ, ಮಾನ್ಯ ವಿಧಾನ ಪರಿಷತ್ ಸದಸ್ಯರು ಇವರು ಮೇಲೆ ಓದಲಾದ ಕ್ರಮ ಸಂಖ್ಯೆ (2)ರಲ್ಲಿ ಮಾನ್ಯ ಕಂದಾಯ ಸಚಿವರಿಗೆ ಸಲ್ಲಿಸಿದ ಮನವಿಯಲ್ಲಿ ಬೆಂಗಳೂರು ದಕ್ಷಿಣ ತಾಲ್ಲೂಕು, ಕೆಂಗೇರಿ ಹೋಬಳಿ, ಕುಂಬಳಗೋಡು ಗ್ರಾಮದ ಸ.ನಂ. 182 ರಲ್ಲಿ 5 ಎಕರೆ ಜಮೀನನ್ನು ಪಂಚಶೀಲ ವೆಲ್‌ಫೇರ್ ಅಸೋಸಿಯೇಷನ್ ಇವರಿಗೆ ಗುತ್ತಿಗೆ ಆಧಾರದ ಮೇಲೆ ಮಂಜೂರು ಮಾಡಲಾಗಿದ್ದು, ಸಂಸ್ಥೆಯು ಇಂಜಿನಿಯರಿಂಗ್, ಐಟಿಐ ಮುಂತಾದ ಶೈಕ್ಷಣಿಕ ಕೋರ್ಸುಗಳನ್ನು ಪ್ರಾರಂಭಿಸಲು ಉದ್ದೇಶಿಸಿರುವುದರಿಂದ ಕನಿಷ್ಠ 10 ಎಕರೆ ಜಮೀನು ಅಗತ್ಯವಿರುವುದಾಗಿ ತಿಳಿಸಿ, ಬೆಂಗಳೂರು ಇನ್‌ಸ್ಟಿಟ್ಯೂಟ್ ಫಾರ್ ಹೈಯರ್ ಎಜುಕೇಷನ್ ಅಂಡ್ ರೀಸರ್ಚ್ ಟ್ರಸ್ಟ್ ಇವರಿಗೆ ಮಂಜೂರು ಮಾಡಿರುವ 4 ಎಕರೆ ಜಮೀನನ್ನು ಬಿಟ್ಟುಕೊಡಲು ಆ ಸಂಸ್ಥೆಯು ಒಪ್ಪಿಗೆ ನೀಡಿರುವುದರಿಂದ ಆ 4 ಎಕರೆ ಜಮೀನನ್ನು ಪಂಚಶೀಲ ವೆಲ್‌ಫೇರ್ ಅಸೋಸಿಯೇಷನ್ ಇವರಿಗೆ ಮಂಜೂರು ಮಾಡಲು ಕೋರಿರುತ್ತಾರೆ.

ವಿಶೇಷ ಜಿಲ್ಲಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ ಇವರು ಮೇಲೆ ಓದಲಾದ ಕ್ರಮ ಸಂಖ್ಯೆ (3) ರಲ್ಲಿನ ದಿ : 18.08.2009ರ ಪತ್ರದಲ್ಲಿ ಸರ್ಕಾರಕ್ಕೆ ವರದಿಯನ್ನು ಸಲ್ಲಿಸಿ, ಬೆಂಗಳೂರು ಇನ್‌ಸ್ಟಿಟ್ಯೂಟ್ ಫಾರ್ ಹೈಯರ್ ಎಜುಕೇಷನ್ ಅಂಡ್ ರೀಸರ್ಚ್ ಟ್ರಸ್ಟ್ ಇವರಿಗೆ ಕುಂಬಳಗೋಡು ಗ್ರಾಮದ ಸ.ನಂ. 182 ರಲ್ಲಿ ಗುತ್ತಿಗೆಗೆ ಮಂಜೂರಾದ 4 ಎಕರೆ ಜಮೀನಿಗೆ ಬದಲಾಗಿ ಹೊಸಕೆರೆಹಳ್ಳಿ ಸ.ನಂ.7ರಲ್ಲಿ 7.05 ಎಕರೆ ಜಮೀನನ್ನು ಗುತ್ತಿಗೆಗೆ ಮಂಜೂರು ಮಾಡಲು ಹಾಗೂ ಈ 4 ಎಕರೆ ಜಮೀನನ್ನು ಪಂಚಶೀಲ ವೆಲ್‌ಫೇರ್ ಅಸೋಸಿಯೇಷನ್ ಇವರಿಗೆ ಗುತ್ತಿಗೆ ಆಧಾರದ ಮೇಲೆ ಮಂಜೂರು ಮಾಡಲು ಸರ್ಕಾರದ ಆದೇಶ ಕೋರಿರುತ್ತಾರೆ.

ವಿಶೇಷ ಜಿಲ್ಲಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ ಇವರು ಮೇಲೆ ಓದಲಾದ ಕ್ರಮ ಸಂಖ್ಯೆ (4) ರಲ್ಲಿನ ದಿ : 31-08-2009 ರ ಪತ್ರದಲ್ಲಿ ಸರ್ಕಾರಕ್ಕೆ ವರದಿಯನ್ನು ಸಲ್ಲಿಸಿ, ಪಂಚಶೀಲ ವೆಲ್‌ಫೇರ್ ಅಸೋಸಿಯೇಷನ್ ಇವರಿಗೆ 5 ಎಕರೆ ವಿಸ್ತೀರ್ಣದ ಜಮೀನನ್ನು 30 ವರ್ಷಗಳ ಗುತ್ತಿಗೆ ಆಧಾರದ ಮೇಲೆ ಆಯಾಯಾ ವರ್ಷ ಚಾಲ್ತಿಯಲ್ಲಿರುವ ಮಾರ್ಗಸೂಚಿ ಬೆಲೆಯ ಶೇಕಡ 1 ರಷ್ಟು ದರದಂತೆ ನಿಗದಿಪಡಿಸಿ, ಮಂಜೂರು ಮಾಡಿದ್ದು, ಅದರಂತೆ ಸದರಿ ಸಂಸ್ಥೆಯು ದಿ. 24.07.2008 ರಂದು ರೂ. 2,50,055/- ಗಳನ್ನು ಪಾವತಿ ಮಾಡಿ, ಸ್ವಾಧೀನ ಪಡೆದಿರುವುದಾಗಿ ತಿಳಿಸಿರುತ್ತಾರೆ. ಅಲ್ಲದೇ ಬೆಂಗಳೂರು ಇನ್‌ಸ್ಟಿಟ್ಯೂಟ್ ಫಾರ್ ಹೈಯರ್ ಎಜುಕೇಷನ್ ಅಂಡ್ ರೀಸರ್ಚ್ ಟ್ರಸ್ಟ್ ಇವರಿಗೆ ಹೆಮ್ಮಿಗೆಪುರ ಗ್ರಾಮದ ಸ.ನಂ.92 ರಲ್ಲಿ 8 ಎಕರೆ ಜಮೀನನ್ನು ವಾರ್ಷಿಕ ರೂ.500/- ರಂತೆ ಗುತ್ತಿಗೆ ದರ ವಿಧಿಸಿ 30 ವರ್ಷಗಳ ಅವಧಿಗೆ ಮಂಜೂರು ಮಾಡಿದ್ದು, ದಿ. 13.10.2003 ರಂದು ರೂ.4000/- ಪಾವತಿಸಿರುವುದಾಗಿ ತಿಳಿಸಿರುತ್ತಾರೆ. ಆದರೆ ಈ ಜಮೀನನ್ನು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರವು ಉಪಯೋಗಿಸಿಕೊಂಡಿರುವುದರಿಂದ, ಇದಕ್ಕೆ ಬದಲಿಯಾಗಿ ತಾವರೆಕೆರೆ ಹೋಬಳಿ ಯಲಚಗುಪ್ಪೆ ಗ್ರಾಮದ ಸ.ನಂ.93 ರಲ್ಲಿ 4 ಎಕರೆ ಜಮೀನನ್ನು ವಾರ್ಷಿಕ ರೂ.10,000/- ಗುತ್ತಿಗೆ ದರ ವಿಧಿಸಿ ಮಂಜೂರು ಮಾಡಲು ಅನುಮತಿ ನೀಡಿದ್ದು, ತದನಂತರ ಈ ಜಮೀನಿಗೆ ಬದಲಾಗಿ ಕುಂಬಳಗೋಡು ಗ್ರಾಮದ ಸ.ನಂ. 182 ರಲ್ಲಿ 4 ಎಕರೆ ಜಮೀನನ್ನು ಗುತ್ತಿಗೆ ಆಧಾರದ ಮೇಲೆ ಮಂಜೂರು ಮಾಡಲು ಅನುಮೋದನೆ ನೀಡಿದ್ದು, ದಿ. 30-12-2008 ರಂದು ರೂ. 40,000/-ಗಳನ್ನು ಪಾವತಿಸಿದ್ದು, ದಿ : 22-01-2009 ರಂದು ಸುಬರ್ದು ನೀಡಲಾಗಿರುತ್ತದೆಂದು ತಿಳಿಸಿರುತ್ತಾರೆ.

ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿದೆ ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂ : ಆರ್‌ಡಿ 612 ಎಲ್‌ಜಿಬಿ 2008, ಬೆಂಗಳೂರು, ದಿನಾಂಕ : 17–05–2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಬೆಂಗಳೂರು ಇನ್‌ಸ್ಟಿಟ್ಯೂಟ್ ಫಾರ್ ಹೈಯರ್ ಎಜುಕೇಷನ್ ಅಂಡ್ ರೀಸರ್ಚ್ ಟ್ರಸ್ಟ್ ಇವರಿಗೆ ಬೆಂಗಳೂರು ದಕ್ಷಿಣ ತಾಲ್ಲೂಕು, ಉತ್ತರಹಳ್ಳಿ ಹೋಬಳಿ, ಹೊಸಕೆರೆಹಳ್ಳಿ ಸ.ನಂ.7ರಲ್ಲಿನ 7.05 ಎಕರೆ ಜಮೀನನ್ನು ಬದಲಿ ಜಮೀನಾಗಿ ಪ್ರಸ್ತುತ ಮಾರ್ಗಸೂಚಿ ಬೆಲೆಯ ಶೇಕಡ 50 ರಷ್ಟು ದರ ವಿಧಿಸಿ ಮಂಜೂರು ಮಾಡಲು ಹಾಗೂ ಬೆಂಗಳೂರು ಇನ್‌ಸ್ಟಿಟ್ಯೂಟ್ ಫಾರ್ ಹೈಯರ್ ಎಜುಕೇಷನ್ ಅಂಡ್ ರೀಸರ್ಚ್ ಟ್ರಸ್ಟ್ ಇವರಿಗೆ ಈ ಹಿಂದೆ ಮಂಜೂರು ಮಾಡಲಾಗಿರುವ ಬೆಂಗಳೂರು ದಕ್ಷಿಣ ತಾಲ್ಲೂಕು, ಕೆಂಗೇರಿ ಹೋಬಳಿ, ಕುಂಬಳಗೋಡು ಗ್ರಾಮದ ಸ.ನಂ. 182 ರಲ್ಲಿನ 4 ಎಕರೆ ಜಮೀನನ್ನು ಪಂಚಶೀಲ ವೆಲ್‌ಫೇರ್ ಅಸೋಸಿಯೇಷನ್ ಇವರಿಗೆ ಪ್ರಸ್ತುತ ಮಾರ್ಗಸೂಚಿ ಬೆಲೆಯ ಶೇಕಡ 50 ರಷ್ಟನ್ನು ವಿಧಿಸಿ ಮಂಜೂರು ಮಾಡಲು ಸರ್ಕಾರವು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಇ. ಈಶ್ವರ ನಾಯಕ್)**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂ.ಮಂ.).

ಪಿ.ಆರ್. 1392

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ಡಾ॥ ಅನ್ನಪೂರ್ಣ, ಮಹಿಳಾ ವೈದ್ಯಾಧಿಕಾರಿ, ಸಾರ್ವಜನಿಕ ಆಸ್ಪತ್ರೆ, ಸಿಂಧನೂರು, ರಾಯಚೂರು ಜಿಲ್ಲೆ ಇವರ ಅನಧಿಕೃತ ಗೈರುಹಾಜರಿ ಸಂಬಂಧ ಸರ್ಕಾರಿ ಸೇವೆಯಿಂದ ವಿಮೋಚನೆಗೊಳಿಸುವ ಬಗ್ಗೆ ಆದೇಶ.

**ಓದಲಾಗಿದೆ :** ಆಯುಕ್ತರು, ಆರೋಗ್ಯ ಮತ್ತು ಕು.ಕ.ಸೇವೆಗಳು, ಬೆಂಗಳೂರು ರವರ ಪತ್ರ ಸಂಖ್ಯೆ : ಡಿಪಿಜಿ (3) 27/2010–11, ದಿನಾಂಕ 15–04–2010.

**ಪ್ರಸ್ತಾವನೆ :**

ಡಾ॥ ಅನ್ನಪೂರ್ಣ, ಮಹಿಳಾ ವೈದ್ಯಾಧಿಕಾರಿ, ಸಾರ್ವಜನಿಕ ಆಸ್ಪತ್ರೆ, ಸಿಂಧನೂರು, ರಾಯಚೂರು ಜಿಲ್ಲೆ ಇವರು ದಿನಾಂಕ 29–06–2009 ರಿಂದ ಈವರೆವಿಗೂ ಸುಮಾರು 9 ತಿಂಗಳಿಂದ ಹೆಚ್ಚು ಅನಧಿಕೃತ ಗೈರುಹಾಜರಾಗಿದ್ದು, ಈಗಾಗಲೇ ಮೂರು ಭಾರಿ ನೋಟೀಸ್‌ಗಳನ್ನು ಕಳುಹಿಸಲಾಗಿದ್ದರೂ ಕರ್ತವ್ಯಕ್ಕೆ ಹಾಜರಾಗಿರುವುದಿಲ್ಲವೆಂದು ಹಾಗೂ ಯಾವುದೇ ಮಾಹಿತಿಯನ್ನು ಸಹ ನೀಡಿರುವುದಿಲ್ಲವೆಂದು, ಸದರಿ ಆಸ್ಪತ್ರೆಯ ಮುಖ್ಯ ವೈಧ್ಯಾಧಿಕಾರಿಗಳು ವರದಿ ಮಾಡಿರುವರೆಂದು, ಅಲ್ಲದೆ ಇವರು ಮಹಿಳಾ ವೈದ್ಯಾಧಿಕಾರಿಗಳಾಗಿರುವುದರಿಂದ ಆಸ್ಪತ್ರೆಗೆ ಬರುವ ಮಹಿಳಾ ರೋಗಿಗಳಿಗೆ ತುಂಬಾ ತೊಂದರೆಯಾಗುತ್ತಿರುವುದಾಗಿ ಸಾರ್ವಜನಿಕರು ದೂರು ನೀಡುತ್ತಿರುವುದಾಗಿ ತಿಳಿಸಿರುವ ಆರೋಪಕ್ಕೆ ಸಂಬಂಧಿಸಿದಂತೆ ಸದರಿ ವೈದ್ಯರಿಗೆ ಶಿಸ್ತುಕ್ರಮ ಜರುಗಿಸುವ ಸಲುವಾಗಿ ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ರವರು ಮೇಲೆ ಓದಲಾದ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಕಳುಹಿಸಿರುತ್ತಾರೆ.

ಸರ್ಕಾರವು ಆಯುಕ್ತರ ಪ್ರಸ್ತಾವನೆಯನ್ನು ಪರಿಶೀಲಿಸಿದೆ. ಡಾ॥ ಅನ್ನಪೂರ್ಣರವರು ಸರ್ಕಾರಿ ಅಧಿಸೂಚನೆ ಸಂಖ್ಯೆ ಆಕುಕ 122 ಹೆಚ್‌ಎಸ್‌ಹೆಚ್ 2007 ದಿನಾಂಕ 08–02–2008 ರ ಪ್ರಕಾರ ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿಯಾಗಿ ನೇಮಕವಾಗಿದ್ದು, ಈ ಆಧಾರದ ಮೇಲೆ ಸದರಿಯವರು ದಿನಾಂಕ 24–02–2008 ರಂದು ಸಾ.ಆ. ಸಿಂಧನೂರು ಇಲ್ಲಿ ಕರ್ತವ್ಯಕ್ಕೆ ಹಾಜರಾಗಿ (ದಾಖಲಾತಿ ಪ್ರಕಾರ) ದಿನಾಂಕ : 04–05–2009 ರಿಂದ 17–06–2009 ರವರೆಗೆ ವಿವಿಧ ರಜೆಯಲ್ಲಿ ತೆರಳಿದ್ದು, ಈ ಅವಧಿಗೆ ರಜೆ ಮಂಜೂರಾಗಿದೆ. ತದನಂತರ ದಿನಾಂಕ 18–06–2009 ರಿಂದ ಪುನಃ ರಜೆಯನ್ನು ವಿಸ್ತರಿಸಿದ್ದು ಸದರಿ ರಜೆಯು ಮಂಜೂರಾಗದೆ ಇದ್ದು ಇಲ್ಲಿಯವರೆವಿಗೂ ಸದರಿಯವರು ಕರ್ತವ್ಯಕ್ಕೆ ಹಾಜರಾಗದೆ ಕರ್ತವ್ಯಲೋಪವೆಸಗಿದ್ದು, ಈ ಸಂಬಂಧ 3 ಬಾರಿ ನೋಟೀಸ್ ಜಾರಿ ಮಾಡಿದ್ದು, ಸದರಿ ನೋಟೀಸ್‌ಗಳನ್ನು ದಿನಾಂಕ 26–08–2009 ಹಾಗೂ 07.11.2009 ರಂದು ಸ್ವೀಕರಿಸಿದ್ದು, ಸದರಿ ನೋಟೀಸ್‌ಗಳಿಗೆ ಆರೋಪಿತ ಅಧಿಕಾರಿಯು ಯಾವುದೇ ಉತ್ತರವನ್ನು ನೀಡಿಲ್ಲ ಅಥವಾ ಕರ್ತವ್ಯಕ್ಕೆ ಹಾಜರಾಗಿರುವುದಿಲ್ಲ.

ಈ ಪ್ರಕರಣದಲ್ಲಿ ದಾಖಲಾತಿಗಳನ್ನು ಪರಿಶೀಲಿಸಿದಾಗ ವ್ಯಕ್ತವಾಗುವ ಅಂಶವೆಂದರೆ, ಆಪಾದಿತ ವೈದ್ಯರು ದಿನಾಂಕ 29–06–2009 ರಿಂದ ಈವರೆವಿಗೂ ಸುಮಾರು 9 ತಿಂಗಳಿಂದ ಹೆಚ್ಚು ಅನಧಿಕೃತ ಗೈರುಹಾಜರಾಗಿದ್ದು, ಇವರು ಸಕ್ಷಮ ಪ್ರಾಧಿಕಾರದ ಪೂರ್ವಾನುಮತಿ ಅಥವಾ ರಜೆ ಮಂಜೂರಾತಿ ಇಲ್ಲದೆ ಸರ್ಕಾರಿ ಸೇವೆಗೆ ಅನಧಿಕೃತವಾಗಿ ಗೈರುಹಾಜರಾಗಿರುವುದು, ನೋಟೀಸಿಗೆ ಸ್ಪಂದಿಸದೆ ಇರುವುದು ದಾಖಲಾತಿಗಳಿಂದ ದೃಢಪಡುತ್ತದೆ. ಇವರು ಖಾಯಂ ಪೂರ್ವ ಸೇವಾವಧಿಯನ್ನು ಪೂರೈಸದೆ ಇರುವುದರಿಂದ ಹಾಗೂ ಇವರು ಖಾಯಂ ಪೂರ್ವಸೇವಾವಧಿಯಲ್ಲಿಯೇ ಸರ್ಕಾರಿ ನೌಕರರಿಗೆ

ತಕ್ಕದ್ದಲ್ಲದ ರೀತಿಯಲ್ಲಿ ವರ್ತಿಸಿರುವುದು ದಾಖಲಾತಿಗಳಿಂದ ದೃಢಪಡುತ್ತದೆ. ಆದ್ದರಿಂದ ಇವರನ್ನು ಕರ್ನಾಟಕ ನಾಗರೀಕ ಸೇವಾ (ಪ್ರೊಬೇಷನರಿ) ನಿಯಮಾವಳಿಗಳು 1977ರ, ನಿಯಮ-6 ರಡಿಯಲ್ಲಿ ಸರ್ಕಾರಿ ಸೇವೆಯಿಂದ ವಿಮೋಚನೆಗೊಳಿಸಲು ಸರ್ಕಾರವು ತೀರ್ಮಾನಿಸಿದೆ. ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂ : ಆಕುಕ 135 ಎಂಎಸ್‌ಎ 2010, ಬೆಂಗಳೂರು, ದಿನಾಂಕ : 28-05-2010**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳಿಂದಾಗಿ, ಸರ್ಕಾರವು, ಡಾ॥ ಅನ್ನಪೂರ್ಣ, ಮಹಿಳಾ ವೈದ್ಯಾಧಿಕಾರಿ, ಸಾರ್ವಜನಿಕ ಆಸ್ಪತ್ರೆ, ಸಿಂಧನೂರು, ರಾಯಚೂರು ಜಿಲ್ಲೆ ಇವರು ಸರ್ಕಾರಿ ಸೇವೆಗೆ ದಿನಾಂಕ 29-06-2009 ರಿಂದ ಈವರೆವಿಗೂ ಅಂದರೆ ಸುಮಾರು 9 ತಿಂಗಳಿಂದ ಹೆಚ್ಚು ಅವಧಿಯವರೆಗೆ ಅನಧಿಕೃತ ಗೈರುಹಾಜರಾಗಿದ್ದು, ಇವರು ಖಾಯಂ ಪೂರ್ವಸೇವಾವಧಿಯಲ್ಲಿಯೇ ಸರ್ಕಾರಿ ನೌಕರರಿಗೆ ತಕ್ಕದ್ದಲ್ಲದ ರೀತಿಯಲ್ಲಿ ವರ್ತಿಸಿ, ಕರ್ತವ್ಯಚ್ಯುತಿ ಎಸಗಿರುವುದರಿಂದ, ಇವರನ್ನು ಕರ್ನಾಟಕ ನಾಗರೀಕ ಸೇವಾ (ಪ್ರೊಬೇಷನರಿ) ನಿಯಮಾವಳಿಗಳು 1977ರ, ನಿಯಮ-6 ರಡಿಯಲ್ಲಿ ತಕ್ಷಣದಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ವಿಮೋಚನೆಗೊಳಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**(ಪದ್ಮಾವತಿ)**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

ಪಿ.ಆರ್. 1393

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ಆಯುಷ್ ಇಲಾಖೆಯ ಸ್ನಾತಕೋತ್ತರ ವಿದ್ಯಾರ್ಥಿಗಳು/ಹೌಸ್ ಸರ್ಜನ್‌ಗಳಿಗೆ ಶಿಷ್ಯವೇತನ ಹೆಚ್ಚಿಸುವ ಬಗ್ಗೆ.

**ಓದಲಾಗಿದೆ :** ನಿರ್ದೇಶಕರು, ಆಯುಷ್ ನಿರ್ದೇಶನಾಲಯ ರವರ ಪತ್ರ ಸಂಖ್ಯೆ : ಆಯುಷ್/56/ ಅಭಿವೃದ್ಧಿ(1)/2009-10, ದಿನಾಂಕ 08-02-2010.

**ಪ್ರಸ್ತಾವನೆ :**

ಮೇಲೆ ಓದಲಾದ ಪತ್ರದಲ್ಲಿ, ಆಯುಷ್ ಇಲಾಖೆಯಲ್ಲಿ ಸ್ನಾತಕೋತ್ತರ ಹಾಗೂ ಗೃಹವೈದ್ಯ ವ್ಯಾಸಂಗ ಮಾಡುತ್ತಿರುವ ವಿದ್ಯಾರ್ಥಿಗಳಿಗೆ ವೈದ್ಯಕೀಯ ಶಿಕ್ಷಣ ಇಲಾಖೆಯಲ್ಲಿ ವ್ಯಾಸಂಗ ಮಾಡುತ್ತಿರುವ ಅಲೋಪತಿ ವಿದ್ಯಾರ್ಥಿಗಳಿಗೆ ನೀಡುತ್ತಿರುವ ದರದಲ್ಲಿ ಶಿಷ್ಯವೇತನವನ್ನು ನೀಡುವಂತೆ ಕೋರಿರುತ್ತಾರೆ. ಪ್ರಸ್ತುತ ಆಯುಷ್ ಗೃಹವೈದ್ಯ ವಿದ್ಯಾರ್ಥಿಗಳಿಗೆ ಮಾಸಿಕ ರೂ.6000/- ಹಾಗೂ ಸ್ನಾತಕೋತ್ತರ ವಿದ್ಯಾರ್ಥಿಗಳಿಗೆ ಮಾಸಿಕ ರೂ.11000/- ರಂತೆ ಶಿಷ್ಯವೇತನ ನೀಡಲಾಗುತ್ತಿದೆ. ಅಲೋಪತಿ ವಿದ್ಯಾರ್ಥಿಗಳಿಗೆ ನೀಡುತ್ತಿರುವ ಶಿಷ್ಯವೇತನಕ್ಕೆ ಅನುಗುಣವಾಗಿ ರೂ.8000/- ಹಾಗೂ ರೂ.14000/- ಗಳಿಗೆ ಹೆಚ್ಚಿಸುವಂತೆ ಕೋರಿರುತ್ತಾರೆ.

ಸರ್ಕಾರವು ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ : ಆಕುಕ 86 ಪಿಟಿಡಿ 2010, ಬೆಂಗಳೂರು, ದಿನಾಂಕ : 28-05-2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಆಯುಷ್ ಇಲಾಖೆಯಲ್ಲಿ ಗೃಹವೈದ್ಯ ಮತ್ತು ಸ್ನಾತಕೋತ್ತರ ವಿದ್ಯಾರ್ಥಿಗಳಿಗೆ ನೀಡುತ್ತಿರುವ ಮಾಸಿಕ ಶಿಷ್ಯ ವೇತನವನ್ನು ರೂ.6000/- ಹಾಗೂ ರೂ.11000/- ದಿಂದ ಕ್ರಮವಾಗಿ ರೂ.8000/- ಹಾಗೂ ರೂ.14000/- ಗಳಿಗೆ ಹೆಚ್ಚಿಸಿದೆ.

ಇದಕ್ಕೆ ತಗಲುವ ಪದ್ಧತಿವಾರು ವೆಚ್ಚವನ್ನು 2010-11 ನೇ ಸಾಲಿನ ಲೆಕ್ಕ ಶೀರ್ಷಿಕೆಗಳ ಅಡಿಯಲ್ಲಿ ಒದಗಿಸಿರುವ ಅನುದಾನದಿಂದ ಭರಿಸತಕ್ಕದ್ದು.

ಸದರಿ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ : ಆಕುಕ 430 ಆಂಆಸ 2010, ದಿನಾಂಕ 05.04.2010 ಹಾಗೂ ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಆಇ 584 ವೆಚ್ಚ-5/2010, ದಿನಾಂಕ 25-05-2010 ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**(ಆರ್.ಎಸ್. ಇಟಗಿ)**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.
(ಭಾರತೀಯ ವೈದ್ಯ ಪದ್ಧತಿ)

ಪಿ.ಆರ್. 1394

**ಕಂದಾಯ ಸಚಿವಾಲಯ**

**ವಿಷಯ :** ಮೈಸೂರು ಸಿಟಿ ಚಾಮರಾಜ ಜೋಡಿ ರಸ್ತೆಯಲ್ಲಿರುವ ಶ್ರೀ ಚಿಕ್ಕಬಸಮ್ಮಯ್ಯನವರ ವಿದ್ಯಾರ್ಥಿ ನಿಲಯವನ್ನು ಅಧಿಸೂಚಿತ ಸಂಸ್ಥೆಗಳ ಪಟ್ಟಿಯಿಂದ ಹೊರತುಪಡಿಸುವ ಬಗ್ಗೆ.

**ಓದಲಾಗಿದೆ :** ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆರವರ ಪತ್ರ ಸಂಖ್ಯೆ : ಏಕರೂಪ ಶಾಸಕ ಸಿಆರ್ 29/2006–07, ದಿನಾಂಕ 21–05–2009.

**ಪ್ರಸ್ತಾವನೆ :**

ಮೇಲೆ ಓದಲಾದ ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆರವರ ಪತ್ರ ದಿನಾಂಕ 21–05–2009 ರಲ್ಲಿ ಮೈಸೂರು ಜಿಲ್ಲೆ, ಮೈಸೂರು ಸಿಟಿ ಚಾಮರಾಜ ಜೋಡಿ ರಸ್ತೆಯಲ್ಲಿರುವ ಶ್ರೀ ಚಿಕ್ಕಬಸಮ್ಮಯ್ಯನವರ ವಿದ್ಯಾರ್ಥಿ ನಿಲಯವನ್ನು ಅಧಿಸೂಚಿತ ಸಂಸ್ಥೆಗಳ ಪಟ್ಟಿಯಿಂದ ಈ ಕೆಳಕಂಡ ಕಾರಣಗಳನ್ವಯ ಹೊರತುಪಡಿಸುವಂತೆ ಜಿಲ್ಲಾಧಿಕಾರಿಗಳು, ಮೈಸೂರು ಜಿಲ್ಲೆರವರು ಕೋರಿಕೆ ಸಲ್ಲಿಸಿರುತ್ತಾರೆ.

(ಅ) ಸಂಸ್ಥೆಯ ಕಾರ್ಯದರ್ಶಿಗಳು ಒದಗಿಸಿದ ಮಾಹಿತಿಯಂತೆ ಶ್ರೀ ಚಿಕ್ಕಬಸಮ್ಮಯ್ಯನವರ ದಾನ ಪತ್ರದ ಪ್ರಕಾರ ಏಳು ಜನರಿಗಿಂತ ಕಡಿಮೆ ಇಲ್ಲದಂತೆ ಟ್ರಸ್ಟ್ ಸ್ಥಾಪಿಸಬೇಕೆಂದು ಅದರಂತೆ ಏಳು ಜನರಿದ್ದು, ಟ್ರಸ್ಟ್‌ರವರು ಕಾರಣಾಂತರದಿಂದ ಬಹಳ ಹಿಂದೆಯೇ ಕೆಲವು ವಿಚಾರಗಳನ್ನು ಮುಜರಾಯಿ ಇಲಾಖೆಗೆ ವಹಿಸಿರುವುದೆಂದು ತಿಳಿದುಬಂದಿರುತ್ತದೆ ;

(ಆ) ಸಂಸ್ಥೆಯ ದಾನಿಗಳ ವಿಲ್‌ನಲ್ಲಿ ಆಡಳಿತ ಮಂಡಳಿ ರಚಿಸಿಕೊಂಡು ಹೋಗಲು ಮಾತ್ರ ಅವಕಾಶವಿದ್ದು, ಆಡಳಿತ ಮಂಡಳಿಯವರು ಕಾರಣಾಂತರದಿಂದ ಮುಜರಾಯಿ ಸಂಸ್ಥೆಗೆ ವಹಿಸಿರುವುದು ಕಂಡುಬರುತ್ತದೆ ;

(ಇ) ಈ ವಿದ್ಯಾರ್ಥಿ ನಿಲಯದ ನಿರ್ವಹಣೆಯನ್ನು ಟ್ರಸ್ಟ್‌ನವರೇ ನಿರ್ವಹಿಸುತ್ತಿರುತ್ತಾರೆ ಹಾಗೂ ಸಂಸ್ಥೆಗೆ ಸಮಿತಿ ರಚನೆ ಮಾಡಿರುವುದಿಲ್ಲ ;

(ಈ) ಈ ಸಂಸ್ಥೆಗೆ ತಸ್ಥೀಕ್, ವರ್ಷಾಸನ, ನಗದು ಅನುದಾನ ಯಾವುದೂ ಮಂಜೂರಾಗಿರುವುದಿಲ್ಲ. ಈ ಹಿಂದೆ ಟ್ರಸ್ಟ್‌ನವರು ಕಾರಣಾಂತರದಿಂದ ಮುಜರಾಯಿ ಇಲಾಖೆಗೆ ವಹಿಸಿರುವುದರಿಂದ ಮುಜರಾಯಿ ಸಂಸ್ಥೆಗಳ ಪಟ್ಟಿಯಲ್ಲಿ ಪ್ರಕಟವಾಗಿರುವುದು ಕಂಡುಬರುತ್ತದೆ.

ಜಿಲ್ಲಾಧಿಕಾರಿಗಳ ಕೋರಿಕೆಯಂತೆ ಶ್ರೀ ಚಿಕ್ಕಬಸಮ್ಮಯ್ಯನವರ ಸಂಸ್ಥೆಯ ವಿದ್ಯಾರ್ಥಿ ನಿಲಯವಾಗಿರುವುದರಿಂದ ಸಂಸ್ಥೆಗೆ ಯಾವುದೇ ಸರ್ಕಾರದ ಅನುದಾನವಿಲ್ಲದಿರುವುದರಿಂದ ಇದನ್ನು ಅಧಿಸೂಚಿತ ಸಂಸ್ಥೆಗಳ ಪಟ್ಟಿಯಿಂದ ಹೊರತುಪಡಿಸುವಂತೆ ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆರವರು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆರವರ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ : ಕಂಇ 76 ಮುಆಬಿ 2009, ಬೆಂಗಳೂರು, ದಿನಾಂಕ : 19–05–2010**

ಮೇಲೆ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಪ್ರಸ್ತಾಪಿತ ಸಂಸ್ಥೆಯು ಒಂದು ವಿದ್ಯಾರ್ಥಿ ನಿಲಯವಾಗಿರುವುದರಿಂದ ಹಾಗೂ ಇಂತಹ ವಿದ್ಯಾರ್ಥಿ ನಿಲಯಗಳನ್ನು ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಅಧಿನಿಯಮ 1997ರ ಕಾಯ್ದೆಯ ವ್ಯಾಪ್ತಿಯಲ್ಲಿ ತರಲು ಅವಕಾಶವಿಲ್ಲದಿರುವುದರಿಂದ ಶ್ರೀ ಚಿಕ್ಕಬಸಮ್ಮಯ್ಯನವರ ವಿದ್ಯಾರ್ಥಿ ನಿಲಯವು ಇದೊಂದು ವಿದ್ಯಾರ್ಥಿ ನಿಲಯವಾಗಿರುವುದರಿಂದ ಸರ್ಕಾರದ ಅಧಿಸೂಚನೆ ಸಂಖ್ಯೆ ಕಂಇ 77 ಮುಸೇವಿ 2003 ದಿನಾಂಕ 30–04–2003 ರಲ್ಲಿನ ಮೈಸೂರು ಜಿಲ್ಲೆ, ಮೈಸೂರು ತಾಲ್ಲೂಕಿನ ಅಧಿಸೂಚಿತ ಸಂಸ್ಥೆಗಳ ಪಟ್ಟಿಯ ಪುಟ ಸಂಖ್ಯೆ 589ರ ಕ್ರಮ ಸಂಖ್ಯೆ 10 ರಲ್ಲಿ **"ಶ್ರೀ ಚಿಕ್ಕಬಸಮ್ಮ ವಿದ್ಯಾರ್ಥಿ ನಿಲಯ, ನೂರು ಅಡಿ ರಸ್ತೆ, ಮೈಸೂರು"** ಸಂಸ್ಥೆಯನ್ನು ಅಧಿಸೂಚಿತ ಸಂಸ್ಥೆಗಳ ಪಟ್ಟಿಯಿಂದ ಹೊರತುಪಡಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**(ಎಲ್. ಎಸ್. ಶ್ರೀಕಂಠಬಾಬು)**
ಪೀಠಾಧಿಕಾರಿ,
ಕಂದಾಯ ಇಲಾಖೆ (ಮುಜರಾಯಿ).

ಪಿ.ಆರ್. 1395

**ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ**

**ವಿಷಯ :** ಕರ್ನಾಟಕ ಸರ್ಕಾರ ಸಚಿವಾಲಯದ ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆಯ ತಾಂತ್ರಿಕ ಕೋಶದಲ್ಲಿರುವ ವೇತನ ಶ್ರೇಣಿ ರಹಿತ ವೈಜ್ಞಾನಾಧಿಕಾರಿ ಗ್ರೇಡ್–2 ಹುದ್ದೆಯನ್ನು ಮುಂದುವರಿಸುವ ಬಗ್ಗೆ.

**ಓದಲಾಗಿದೆ :** (1) ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 562 ಸಅಸೇ 2009, ದಿನಾಂಕ 11.11.2009.

(2) ಅನಧಿಕೃತ ಟಿಪ್ಪಣಿ ಸಂಖ್ಯೆ : ಅಪಜೀ 12 ಇಎನ್‌ಜಿ 2010, ದಿನಾಂಕ 06.05.2010.

**ಪ್ರಸ್ತಾವನೆ :**

ಮೇಲೆ ಕ್ರಮಸಂಖ್ಯೆ (1) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದ ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆಯ ತಾಂತ್ರಿಕ ಕೋಶದಲ್ಲಿರುವ ವೇತನ ಶ್ರೇಣಿ ರಹಿತ ವೈಜ್ಞಾನಾಧಿಕಾರಿ ಗ್ರೇಡ್–2 ಹುದ್ದೆಯನ್ನು ದಿನಾಂಕ 24–04–2009 ರಿಂದ ಒಂದು ವರ್ಷದ ಅವಧಿಗೆ ತಾತ್ಕಾಲಿಕವಾಗಿ ಮುಂದುವರಿಸಲಾಗಿದೆ. ಮೇಲೆ ಕ್ರಮಸಂಖ್ಯೆ (2) ರಲ್ಲಿ ಓದಲಾದ ಅನಧಿಕೃತ ಟಿಪ್ಪಣಿಯಲ್ಲಿ ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆಯ ತಾಂತ್ರಿಕ ಕೋಶದಲ್ಲಿರುವ ವೈಜ್ಞಾನಾಧಿಕಾರಿ ಗ್ರೇಡ್–2 ಹುದ್ದೆಯ ಅವಧಿಯು ದಿನಾಂಕ 23–04–2010 ಕ್ಕೆ ಮುಕ್ತಾಯವಾಗಿರುವುದರಿಂದ, ಈ ಹುದ್ದೆಯನ್ನು ಮತ್ತೊಂದು ವರ್ಷದ ಅವಧಿಗೆ ಮುಂದುವರಿಸುವಂತೆ ಕೋರಲಾಗಿದೆ. ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 251 ಸಅಸೇ 2010, ಬೆಂಗಳೂರು, ದಿನಾಂಕ : 29–05–2010**

ಕರ್ನಾಟಕ ಸರ್ಕಾರ ಸಚಿವಾಲಯದ ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆಯ ತಾಂತ್ರಿಕ ಕೋಶದಲ್ಲಿರುವ ವೇತನ ಶ್ರೇಣಿ ರಹಿತ ವೈಜ್ಞಾನಾಧಿಕಾರಿ ಗ್ರೇಡ್–2 ಹುದ್ದೆಯನ್ನು ದಿನಾಂಕ 24–04–2010 ರಿಂದ ಅನ್ವಯವಾಗುವಂತೆ ಒಂದು ವರ್ಷದ ಅವಧಿಗೆ ತಾತ್ಕಾಲಿಕವಾಗಿ ಮುಂದುವರಿಸಿ ಆದೇಶಿಸಿದೆ.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ : ಎಫ್‌ಡಿ 1 ಟಿಎಫ್‌ಪಿ 1996, ದಿನಾಂಕ : 10–07–1996 ರಲ್ಲಿ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**(ಎಚ್. ಆರ್. ನಾಗೇಂದ್ರ)**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ.
(ಸೇವೆಗಳು–3)

ಪಿ.ಆರ್. 1396

## ENERGY SECRETARIAT

## CORRIGENDUM

No. EN 76 EMC-2/2010, Bangalore Dated 06-05-2010.

In exercise of the powers conferred in para 24 of the Karnataka Renewable Energy Policy 2009-2014, the Government of Karnataka issues the following amendments to the Government Order No. EN 354 NCE 2008 Dated : 19th January 2010 under the headings :

**4. Scope of the Policy :-**

"The provisions contained in this Renewable Energy Policy will be applicable to all the Renewable Energy Projects. This Policy will be applicable to all the Renewable Energy Projects sanctioned prior to the commencement of the policy and those Renewable Energy projects in the process of development including already commissioned Renewable Energy Projects."

**Shall be read as**

"The provisions contained in this Renewable Energy Policy will be applicable to all the Renewable Energy Projects sanactioned after the date of notification in the official gazette."

**6. Year wise Renewable Energy Target and Capital Investment 2009 to 2014**

"The year wise target for different Renewable Energy sources and the investment necessary during the policy period is given below :

| RE Source | Target MW | Yearwise proposed capacity addition | | | | | Likely total investment (Rs. Crores – at current prices) |
|---|---|---|---|---|---|---|---|
| | | **09-10** | **10-11** | **11-12** | **12-13** | **13-14** | |
| Wind Power | 2969 | 630 | 680 | 530 | 530 | 599 | 15680 |
| Mini and Small Hydro | 600 | 100 | 100 | 150 | 150 | 100 | 2700 |
| Cogeneration in Sugar Industry | 281 | 56 | 56 | 56 | 56 | 57 | 1120 |
| Biomass/Bio-gas | 300 | 60 | 60 | 60 | 60 | 60 | 2100 |
| Waste to Energy | 50 | 10 | 10 | 10 | 10 | 10 | 400 |
| **Total** | **4200** | **856** | **906** | **806** | **806** | **826** | **22000** |

**The following shall be substituted to the table**

| **RE Source** | **Target MW** | **Yearwise proposed capacity addition** | | | | | **Likely total investment (Rs. Crores – at current prices)** |
|---|---|---|---|---|---|---|---|
| | | **09-10** | **10-11** | **11-12** | **12-13** | **13-14** | |
| Wind Power | 2969 | 630 | 680 | 530 | 530 | 599 | 15680 |
| Mini and Small Hydro | 600 | 100 | 100 | 150 | 150 | 100 | 2700 |
| Cogeneration in Sugar Industry | 281 | 56 | 56 | 56 | 56 | 57 | 1120 |
| Biomass/Bio-gas | 300 | 60 | 60 | 60 | 60 | 60 | 2100 |
| Waste to Energy | 50 | 10 | 10 | 10 | 10 | 10 | 400 |
| Solar PV/GSP/ Thermal Sector | 126 | 6 | 30 | 30 | 30 | 30 | 1890 |
| **Total** | **4326** | **862** | **936** | **836** | **836** | **856** | **23890** |

**7 (i) Land Identification for Renewable Energy Projects :**

"Further keeping in view the welfare interest of the farmers, certain equity of not less than 5% of gross energy generated will be provided to take the landowner farmers as equity partners in the Renewable Energy Projects."

**Shall be ¸Àomitted.**

**7 (iv) Land Development for Renewable Energy Projects :**

"Karnataka Renewable Energy Development Limited will sublease the developed lands to the Renewable Energy Developers for a period of 30 years.

After 30 years the project stands transferred to the Government"

**Shall be read as**

"Karnataka Renewable Energy Development Limited will sublease the developed lands to the Renewable Energy Developers for a period of 30 years.

Thereafter, the project will be renewed for a period of 5 years at a time after the lease period subject to fulfillment of conditions stipulated by the Government."

**10 (viii) Power Purchase Agreement (PPA) :**

"The sale of electricity by power producers of Energy supply company will be governed by the power purchase agreements executed between the power producers and witnessed by Karnataka Electricity regulatory commission. Power Company of Karnataka limited will assign power purchase agreements to the ESCOM's with back-toback arrangement."

**Shall be read as**

"The sale of electricity by power producers of Energy supply company will be governed by the power purchase agreement executed between the power producers and witnessed by Karnataka Electricity regulatory commission. The Government will assign the power purchase agreements to the ESCOM's at the time of allotment."

**13 (i) Strategy for wind projects**

"To avoid locking of huge capacities the wind project allotment will be restricted to 50 MW at a given area each time. In case of potential in the said location further allocation considered after successful commissioning of the allotted project."

**Shall be omitted.**

By Order and in the name of the Governor of Karnataka
**S.J. SAMPATH KUMAR**
Under Secretary to Government,
Energy Department.

P.R. 1397

## INFRASTRUCTURE DEVELOPMENT SECRETARIAT

**Sub :-** Construction of New Railway line between Kaduru-Chikmagalur [via-Sakaleshpura]

**Read :-** 1. GO. No. IDD 35 NSW 09, dt 24-04-2009
2. Letter No. W63/CN/BNC/MR/B/GL, dt 24-04-2010 from CE/CCN/SWR, Bangalore.

**Preamble:**

Railways are one of the most convenient and widely used means of travel in India and also a very critical component in the logistics. The use of rail network for freight and passenger transport has the potential to reduce road congestion, improve safety, improve economic efficiencies and reduce environmental impacts. To increase the rail density in the State, the State Govt. had taken initiatives to take up rail projects on cost sharing basis (50:50, 2/3rd and 1/3rd etc.,) since 2002. Keeping in view the facts that the allocations for railways has to be increased for early commissioning of railway projects, the State Government has decided to undertake some of the ongoing railway projects in the State, also on cost sharing basis.

2.Accordingly in G.O. read at (1) above, Government of Karnataka decided to take up the balance work of Kaduru-Chikmagalur (via-Sakaleshpura railway project on (50:50 sharing between Gok & Railway). This project was sanctioned during April 1999 and the total length of the project is 93 kms & cost of the project is Rs. 256.17 crores. The expenditure so far is Rs. 82.28 Crore, the project is being taken up from 2010-11 onwards on cost sharing basis between railways and Gok from 2010-11.

3.The Chief Engineer, South Western Railway, Bangalore in his letter read at Sl. No. (2) above, has stated that the total releases made by Railways upto 2009-10 is Rs. 82.28 crores and the balance amount of Rs. 173.88 crores is to be shared equally by Railway/Gok. He has stated that the deposit required from GoK for this year is Rs. 40.00 crore and to release immediately Rs. 20.00 Crore.

4.The proposal of Railways has been examined and it has been decided to release an amount of Rs. 5.00 crore (Rupees Five crore only) out of the Budget of Rs. 272.50 crore provided under the Head of Account "5465-01-190-3-05" (Plan) 211 investment towards cost sharing for new railway projects during 2010-11.

5.Hence this Order.

**Government Order No. IDD 29 NSW 2010, Bangalore, dated : 01-06-2010**

After careful examination of the request of Railways, Government is pleased to under take the balance project work of Kaduru-Chickmagalur (via Sakaleshpura) on 50:50 cost sharing basis and to release an amount of Rs. 5.00 crore (Rupees Five Crore only) being the part of the share of GoK.

2. The expenditure shall be met under the Head of Account "5465-01-190-3-05" (Plan) 211 investment out of the budget provision Rs. 272.50 crore, towards cost sharing for new railway projects during 2010-11.

3. The Chief Executive Officer, K-RIDE is authorized to draw the amount on a payee's receipt duly countersigned by the Under Secretary to Government, Infrastructure Development Department and

K-RIDE shall in turn deposit the same with the Financial Advisor and Chief Accounts Officer (Construction), South Western Railway, Bangalore.

4. This order is issued in accordance with the concurrence of Finance Department given vide U.O. Note. No. FD 851 Exp-1/2010, dated 20-05-2010.

By Order and in the name of the Governor of Karnataka
(**N. Manjula Geetha)**
Under Secretary to Government
Infrastructure Development Department

P.R. 1405

## ಸಹಕಾರ ಸಚಿವಾಲಯ

**ವಿಷಯ** : ಅಖಿಲ ಕರ್ನಾಟಕದ ಗಾಣಿಗರ ಸಂಘ (ರಿ), ಬೆಂಗಳೂರು ಈ ಸಂಘಕ್ಕೆ ಆಡಳಿತಾಧಿಕಾರಿಯನ್ನು ನೇಮಿಸುವ ಬಗ್ಗೆ.

**ಓದಲಾಗಿದೆ** : 1) ಸಹಕಾರ ಸಂಘಗಳ ನಿಬಂಧಕರು, ಕರ್ನಾಟಕ ರಾಜ್ಯ, ಬೆಂಗಳೂರು ಇವರ ಪತ್ರ ಸಂಖ್ಯೆ: ಆರ್‌ಸಿಎಸ್/ಎಡಿಎಂ/209/ಎಸ್‌ಒಆರ್/2009–10, ದಿನಾಂಕ 20–3–2010.

2) ಕಾರಣ ಕೇಳುವ ನೊಟೀಸ್ ಸಂಖ್ಯೆ: ಸಇ 36 ಸಸಂನೋ 2010 ದಿನಾಂಕ 22–4–2010

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ : (1)ರ ಸಹಕಾರ ಸಂಘಗಳ ನಿಬಂಧಕರು, ಕರ್ನಾಟಕ ರಾಜ್ಯ, ಬೆಂಗಳೂರು ಇವರ ದಿನಾಂಕ : 20–3–2010ರ ಪತ್ರದಲ್ಲಿ ಅಖಿಲ ಕರ್ನಾಟಕದ ಗಾಣಿಗರ ಸಂಘ (ರಿ), ಬೆಂಗಳೂರು ಈ ಸಂಘವು 2001 ರಿಂದ ತಹಲ್‌ವರೆವಿಗೂ ಲೆಕ್ಕಪತ್ರಗಳನ್ನು ದಾಖಲಿಸದಿರುವುದು ಮತ್ತು ವಾರ್ಷಿಕ ಸರ್ವಸದಸ್ಯರ ಸಭೆ ನಡೆಸದಿರುವುದು ಕಂಡುಬಂದಿದ್ದು, ಇದಕ್ಕೆ ಸಂಬಂಧಿಸಿದಂತೆ, ಸಾಕಷ್ಟು ಕಾಲಾವಕಾಶ ನೀಡಿದಾಗ್ಯೂ ಸಂಘದ ಲೆಕ್ಕ ಪತ್ರಗಳನ್ನು ದಾಖಲಿಸಲು ಸಂಘವು ವಿಫಲವಾಗಿರುವುದು, ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ 13ರ ಉಲ್ಲಂಘನೆಯಾಗಿದ್ದು, ಈ ಬಗ್ಗೆ ಸಂಘದ ಅಧ್ಯಕ್ಷರು ದಿನಾಂಕ : 9–3–2010 ರಂದು ಸಲ್ಲಿಸಿರುವ ವಿವರಣೆಯನ್ನು ಪರಿಶೀಲಿಸಲಾಗಿ, ಸಂಘವು 2001ನೇ ಇಸವಿಯಿಂದ ಲೆಕ್ಕಪತ್ರವನ್ನು ದಾಖಲಿಸಲು ವಿಫಲವಾಗಿ ಕಾಯ್ದೆ ಕಲಂ 13ನ್ನು ಉಲ್ಲಂಘಿಸಿರುವುದು ಸ್ಪಷ್ಟವಾಗಿರುತ್ತದೆ ಹಾಗೂ ಸಂಘದ ವಾರ್ಷಿಕ ಸರ್ವಸದಸ್ಯರ ಸಭೆಯನ್ನು ನಡೆಸಿರುವ ಬಗ್ಗೆ ಯಾವುದೇ ಮಾಹಿತಿ ಲಭ್ಯವಿರುವುದಿಲ್ಲ. ಇದರಿಂದಾಗಿ ಸಂಘದ ಆಡಳಿತ ಮಂಡಳಿಯು ಕಾಯ್ದೆಬದ್ಧವಾಗಿ ಕಾರ್ಯನಿರ್ವಹಿಸಲು ವಿಫಲರಾಗಿರುವುದು ಕಂಡು ಬಂದಿದ್ದು, ಕಾರಣ ಹಾಲಿ ಇರುವ ಆಡಳಿತ ಮಂಡಳಿಯನ್ನು ರದ್ದುಪಡಿಸಿ, ಸಂಘಕ್ಕೆ ಆಡಳಿತಾಧಿಕಾರಿಯನ್ನು ನೇಮಕ ಮಾಡುವಂತೆ ಬೆಂಗಳೂರು ನಗರ ಜಿಲ್ಲೆ ಜಿಲ್ಲಾ ನೋಂದಣಾಧಿಕಾರಿಗಳು ಶಿಫಾರಸ್ಸು ಮಾಡಿರುವುದರಿಂದ, ಅವರ ಅಭಿಪ್ರಾಯವನ್ನು ಪರಿಗಣಿಸಿ, ಸದರಿ ಸಂಘಕ್ಕೆ ಕಾಯ್ದೆ ಕಲಂ 27(1) ರನ್ವಯ ಆಡಳಿತಾಧಿಕಾರಿಗಳನ್ನು ನೇಮಕ ಮಾಡಲು ಸೂಕ್ತ ಕ್ರಮವಹಿಸುವಂತೆ ಕೋರಿ ಸಹಕಾರ ಸಂಘಗಳ ನಿಬಂಧಕರು ಸರ್ಕಾರಕ್ಕೆ ಪ್ರಸ್ತಾವನೆ ಕಳುಹಿಸಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ : (2) ರಲ್ಲಿ ಅಖಿಲ ಕರ್ನಾಟಕದ ಗಾಣಿಗರ ಸಂಘ (ರಿ), ಬೆಂಗಳೂರು ಈ ಸಂಘದ ಅಧ್ಯಕ್ಷರು/ಕಾರ್ಯದರ್ಶಿಯವರಿಗೆ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ 13ನ್ನು ಉಲ್ಲಂಘನೆ ಮಾಡಿರುವ ಬಗ್ಗೆ ತಿಳಿಸುತ್ತಾ, ಸಂಘದ ಹಿತದೃಷ್ಟಿಯಿಂದ ಹಾಗೂ ಸಂಘದ ಕೆಲಸಕಾರ್ಯಗಳು ಸುಸೂತ್ರವಾಗಿ ನಡೆಸಲು ಸಂಘಕ್ಕೆ ಆಡಳಿತಾಧಿಕಾರಿಯನ್ನು ಏಕೆ ನೇಮಕ ಮಾಡಬಾರದು ಎಂಬ ಬಗ್ಗೆ ಲಿಖಿತ/ಮೌಖಿಕ ಹೇಳಿಕೆಯನ್ನು ಸಲ್ಲಿಸುವಂತೆ ತಪ್ಪಿದಲ್ಲಿ ನೀವು ಹೇಳುವುದು ಏನೂ ಇಲ್ಲವೆಂದು ಭಾವಿಸಿ ನಿಯಮಾನುಸಾರ ಮುಂದಿನ ಕ್ರಮ ಕೈಗೊಳ್ಳಲಾಗುವುದು ಎಂದು ದಿನಾಂಕ : 22–4–2010ರ ಕಾರಣ ಕೇಳುವ ನೋಟೀಸನ್ನು 24–4–2010 ರಂದು ಜಾರಿಗೊಳಿಸಲಾಗಿತ್ತು.

ಸರ್ಕಾರವು ಜಾರಿ ಮಾಡಿರುವ ಕಾರಣಕೇಳುವ ನೋಟಿಸಿಗೆ ಈವರೆವಿಗೂ ಸಂಘದ ಅಧ್ಯಕ್ಷರು/ಕಾರ್ಯದರ್ಶಿಯವರು ಲಿಖಿತ ಉತ್ತರ ನೀಡಿರುವುದಿಲ್ಲ. ಆದ್ದರಿಂದ, ಸಂಸ್ಥೆಯ ಹಿತದೃಷ್ಟಿಯಿಂದ ಮತ್ತು ಸಂಘದ ಸುಸೂತ್ರ ಆಡಳಿತಕ್ಕಾಗಿ, ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ 27(ಎ)ರಂತೆ ಆಡಳಿತಾಧಿಕಾರಿಯನ್ನು ನೇಮಿಸಲು ಸರ್ಕಾರವು ತೀರ್ಮಾನಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಸಇ 36 ಸಸಂನೋ 2010, ಬೆಂಗಳೂರು, ದಿನಾಂಕ: 25ನೇ ಮೇ, 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಅಖಿಲ ಕರ್ನಾಟಕದ ಗಾಣಿಗರ ಸಂಘ (ರಿ), ಬೆಂಗಳೂರು ಈ ಸಂಸ್ಥೆಗೆ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ 27(ಎ) ರನ್ವಯ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಬೆಂಗಳೂರು 1ನೇ ವೃತ್ತ ಇವರನ್ನು ಆಡಳಿತಾಧಿಕಾರಿಯಾಗಿ ಆರು (6) ತಿಂಗಳ ಅವಧಿಗೆ ನೇಮಿಸಿ ಆದೇಶಿಸಿದೆ.

ಆಡಳಿತಾಧಿಕಾರಿಗಳು ಸದರಿ ಅವಧಿಯಲ್ಲಿ ಆಡಳಿತ ಮಂಡಳಿಯ ಅವ್ಯವಹಾರಗಳನ್ನು ಸರಿಪಡಿಸಿ, ಸಂಸ್ಥೆಗೆ ಚುನಾವಣೆ ನಡೆಸಿ, ಚುನಾಯಿತ ನೂತನ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವಂತೆ ಸೂಚಿಸಿದೆ. ಆಡಳಿತಾಧಿಕಾರಿಗಳು ತೆಗೆದುಕೊಂಡ ಕ್ರಮಗಳ ಬಗ್ಗೆ ಸರ್ಕಾರಕ್ಕೆ ಮಾಹಿತಿಯನ್ನು ಸಹ ಒದಗಿಸುವಂತೆ ಸೂಚಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**(ನಂಜುಂಡಪ್ಪ)**
ಸರ್ಕಾರದ ಅಧೀನ ಕಾರ್ಯದರ್ಶಿ
ಸಹಕಾರ ಇಲಾಖೆ

ಪಿ.ಆರ್. 1406

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ವಿಷಯ** : 2010–11ನೇ ಸಾಲಿನಲ್ಲಿ ಸಂಸ್ಥೆಗಳಿಗಾಗಿ ಕೈಗಾರಿಕಾ ಮೂಲಭೂತ ಸೌಕರ್ಯಗಳ ಯೋಜನೆಯಡಿಯಲ್ಲಿ (ಲೆಕ್ಕ ಶೀರ್ಷಿಕೆ 4852–02–800–0–01) ಕೆಐಎಡಿಬಿಗೆ ರೂ. 100.00 ಲಕ್ಷಗಳನ್ನು ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ** :
1) ಸರ್ಕಾರದ ಆದೇಶ ಸಂಖ್ಯೆ ವಾಕೈ/52/ಅಂಆಸ(1)/2010, ಬೆಂಗಳೂರು ದಿನಾಂಕ 01–04–2010
2) ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು ಹಾಗೂ ಕಾರ್ಯನಿರ್ವಾಹಕ ಸದಸ್ಯರು ಕೆ.ಐ.ಎ.ಡಿ.ಬಿ. ರವರ ಪತ್ರ ಸಂಖ್ಯೆ ಕಕೈಪ್ರ ಆಯವ್ಯಯ ಸಿಒಎಫ್ 022329/2010–11, ದಿನಾಂಕ 26–04–2010.
3) ಆಯುಕ್ತರ (ಕೈ.ಅ.) ಇವರ ಪತ್ರ ಸಂಖ್ಯೆ : ಯೋಜನೆ/ಪಿ4/ಕೆಐಎಡಿಬಿ/02/2010–11, ದಿನಾಂಕ 29–04–2010.

**ಪ್ರಸ್ತಾವನೆ :**

ಬಿಜಾಪುರ, ಧಾರವಾಡ ಹಾಗೂ ಗದಗ ಜಿಲ್ಲೆಗಳ ಕೈಗಾರಿಕಾ ಪ್ರದೇಶಗಳಲ್ಲಿ ಮುಲಭೂತ ಸೌಲಭ್ಯಗಳನ್ನು ಉನ್ನತೀಕರಿಸುವುದಕ್ಕಾಗಿ ರೂ. 100.00 ಲಕ್ಷಗಳನ್ನು ಬಿಡುಗಡೆ ಮಾಡಲು ಉಲ್ಲೇಖ (2) ರಂತೆ ಕೋರಿರುತ್ತಾರೆ. 2010–11ನೇ ಸಾಲಿನ ಆಯವ್ಯಯ ಲೆಕ್ಕ ಶೀರ್ಷಿಕೆ 4852–02–800–0–01 (ಯೋಜನೆ) ಅಡಿಯಲ್ಲಿ ಸಂಸ್ಥೆಗಳಿಗಾಗಿ ಕೈಗಾರಿಕಾ ಮೂಲಭೂತ ಸೌಕರ್ಯಗಳು ಯೋಜನೆಯಡಿಯಲ್ಲಿ ಒಟ್ಟು ರೂ. 454.25 ಲಕ್ಷಗಳನ್ನು ಒದಗಿಸಿದ್ದು, ಈ ಮೊತ್ತವನ್ನು ಕೆ.ಐ.ಎ.ಡಿ.ಬಿ. ಸಂಸ್ಥೆಗೆ ರೂ. 254.25 ಲಕ್ಷಗಳನ್ನು ಹಂಚಿಕೆ ಮಾಡಲಾಗಿದೆ.

ಆಯುಕ್ತರು, ಕೈಗಾರಿಕಾಭಿವೃದ್ಧಿ ಮತ್ತು ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಇವರು ಉಲ್ಲೇಖ (3) ರಂತೆ ಕೆ.ಐ.ಎ.ಡಿ.ಬಿ.ಗೆ ಒಟ್ಟು ಹಂಚಿಕೆಯಾಗಿರುವ ರೂ. 234.25 ಲಕ್ಷಗಳಲ್ಲಿ ರೂ. 100.00 ಲಕ್ಷಗಳನ್ನು ಕೂಡಲೇ ಬಿಡುಗಡೆ ಮಾಡಲು ಶಿಫಾರಸ್ಸು ಮಾಡಿರುತ್ತಾರೆ. ಆದರೆ ಗುಲ್ಬರ್ಗಾ ವಿಭಾಗದಲ್ಲಿಯ ಜಿಲ್ಲೆಗಳ ಬೆಳಗಾವಿ ವಿಭಾಗದ ಜಿಲ್ಲೆಗಳಿಗಿಂತ ಹಿಂದುಳಿದ ಪ್ರದೇಶಗಳಾಗಿರುವುದರಿಂದ, ಈ ವಿಭಾಗದ ಕೈಗಾರಿಕಾ ಪ್ರದೇಶಗಳ ಅಭಿವೃದ್ಧಿಗಾಗಿ, ಲೆಕ್ಕ ಶೀರ್ಷಿಕೆ 4852–02–800–0–01 ಅಡಿಯಲ್ಲಿ ರೂ. 100 ಲಕ್ಷಗಳನ್ನು ಕೆ.ಐ.ಎ.ಡಿ.ಬಿ. ಗೆ ಬಿಡುಗಡೆ ಮಾಡಲು ಸರ್ಕಾರ ಅನುಮತಿ ನೀಡಿದೆ. ಆದುದರಿಂದ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಸಿಐ 175 ಎಸ್‌ಪಿಐ 2010, ಬೆಂಗಳೂರು, ದಿನಾಂಕ: 29ನೇ ಮೇ, 2010**

ಗುಲ್ಬರ್ಗಾ ವಿಭಾಗದ ವಿವಿಧ ಜಿಲ್ಲೆಗಳ ಕೈಗಾರಿಕಾ ಪ್ರದೇಶಗಳಲ್ಲಿ ಮೂಲಭೂತ ಸೌಲಭ್ಯಗಳನ್ನು ಉನ್ನತೀಕರಿಸುವುದಕ್ಕಾಗಿ ಲೆಕ್ಕ ಶೀರ್ಷಿಕೆ 4852–02–800–0–01 ಅಡಿಯಲ್ಲಿ ರೂ. 100 ಲಕ್ಷಗಳನ್ನು ಕೆ.ಐ.ಎ.ಡಿ.ಬಿ.ಗೆ ಬಿಡುಗಡೆ ಮಾಡಲು ಈ ಮೂಲಕ ಆದೇಶಿಸಿದೆ.

ಸದರಿ ಅನುದಾನವನ್ನು ಸಿಇಓ, ಕೆ.ಐ.ಎ.ಡಿ.ಬಿ. ರವರು ಸಲ್ಲಿಸುವ ಸ್ವೀಕೃತಿ ರಶೀದಿ ಮೇಲೆ ಆಯುಕ್ತರು ಕೈಗಾರಿಕಾಭಿವೃದ್ಧಿ ಹಾಗೂ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ ಇವರ ಮೇಲು ರುಜು ಪಡೆದು ರಾಜ್ಯ ಹುಜೂರು ಖಜಾನೆಯಿಂದ ಹಣ ಪಡೆಯುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**(ಅಪರ್ಣ ಪಾವಟೆ)**
ಪೀಠಾಧಿಕಾರಿ (ತಾಂತ್ರಿಕ ಕೋಶ)
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

ಪಿ.ಆರ್. 1407